ಕೊಣ್ಣೂರ ಹಣಮಂತರಾಯರು, ಬಿ. ಎ.,

ಸಂಪಾದಕರು



...ಂಗ್ ಹೌಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

ಬೆಂಗಳೂರು.

1924.

ಬೆಲೆ ರೂ. ೦—೧೦—೮

## ವಿಜ್ಞಾಪನೆ

ಮುದ್ರಣಾಲಯದ ಅನನುಕೂಲತೆಯ ಸಲುವಾಗಿ ತೃತೀಯ ಗುಚ್ಛವು ಹೊರಡಲು ತಡವಾಯಿತು. ಚತುರ್ಥ ಗುಚ್ಛವನ್ನು ಆದಷ್ಟು ತೀವ್ರ ಹೊರಡಿಸಲು ಪ್ರಯತ್ನಪಡುವೆವು. ವಾಚಕ ಮಹಾಶಯರು ಅನ್ಯಥಾ ತಿಳಿದುಕೊಳ್ಳಬಾರದೆಂದು ವಿಜ್ಞಾಪನೆ. ಈ ಸಾರೆ ಗದಾಯುದ್ಧಕ್ಕೆ ಟೀಕೆ-ಟಿಪ್ಪಣಿಗಳನ್ನು ಬರೆಯಲು ಪ್ರಾರಂಭಿಸಿದೆ. ವಿದ್ವಜ್ಜನರು ಅದರಲ್ಲಿಯ ತಪ್ಪು ತಡೆಗಳನು ತಿಳುಹಿಸಿದಲ್ಲಿ ಪ್ರೇಮ ಪೂರ್ವಕವಾಗಿಯೂ ಆದರ ಪೂರ್ವಕವಾಗಿಯೂ, ಅವುಗಳನ್ನು ತಿದ್ದಿಕೊಳ್ಳುವೆವು.

ಪ್ರಬುದ್ಧ ಕರ್ಣಾಟಕವನ್ನು ಆದರ್ಶವಾಗಿಟ್ಟುಕೊಂಡು ಮುಂದಿನ ವರ್ಷದ ಸಂಚಿಕೆಗಳನ್ನು ಚಿತ್ರಗಳೊಂದಿಗೆ ಪ್ರಕಟಿಸಬೇಕೆಂದು ನಮ್ಮ ಎಣಿಕೆ. ಈಶ್ವರನ ಅನುಗ್ರಹವಾದರೆ, ಯಾವದು ತಾನೆ ಅಸಾಧ್ಯವು?

**ಸಹೃದಯ ವಿಧೇಯ,**

ಸಂಪಾದಕ.

(ಪಂಪಭಾರತದ ಗದಾ ಯುದ್ಧವು ಮುಂದೆ ಸಾಗಿದ್ದು)

ೂರ್ಯನು ಸಮಸ್ತ ಭೂಮಂಡಲವನ್ನು ಬೆಳಗಿ ಬಳಲಿ ಪಶ್ಚಿಮ ಸಮುದ್ರ ಲ್ಲಿ ಮುಳುಗುವಂತೆ, ದುರ್ಯೋಧನನು ತನ್ನ ಪರಾಕ್ರಮದಿಂದ ಪೃಥ್ವೀ ಲವನ್ನು ಬೆಳಗಿ ಶತ್ರು ಸಮೂಹದೊಡನೆ ಕಾದಿ, ಖಿನ್ನನಾಗಿ ಕೊಳದಲ್ಲಿ ುಳುಗಿ ಅಡಗಿದನು. ಅಹಹ! ಹಣೆಯ ಬರಹವನ್ನು ತಪ್ಪಿಸುವವರಾರು?

ಇಂದ್ರನ ವಜ್ರಹತಿಗಳ್ಗೆ ಕುಲಪರ್ವತವು ಸಮುದ್ರವನ್ನು ಸೇರಿರು ಂತೆ, ದುರ್ಯೋಧನನು ಕೊಳದಲ್ಲಿ ಸೇರಿರಲು, ಧರ್ಮಪುತ್ರನು ಶಲ್ಯನ ಧಾನಂತರದಲ್ಲಿ ರಾಜರಾಜನನ್ನು ರಣಭೂಮಿಯಲ್ಲಿ ಅರಸಿಯುಂ ಕಾಣದೆ, ನಮ್ಮ ಮಾಡುವ ಕರ್ತವ್ಯವಾವುದೆಂದು ನಾರಾಯಣನನ್ನು ಬೆಸಗೊಳಲು,

ಉ॥ ಇಂದಿನ ನೇಸರಿಂದೊಳಗರಾತಿಯನಿಕ್ಕದೆ ಮಾಣ್ದು ಮುಪ್ಪೊಡಿ।
ನ್ನೆಂದುಮಸಾಧ್ಯನಿಂದೆ ಹಳಿಯುಂ ಗಡ ಕೂಡುವನಾತನಂ ಗೆಲ॥
ಲ್ಬಂದಪುದೇ ಬಳಿಕ್ಕದುವೆ ಕಾರಣಮಾಗುಳಿದಿರ್ದನಂಧರಾ।
ಣ್ನಂದನನಲ್ಲಿದುಂತು ತಲೆಯುಚ್ಚುಗುಮೋ ರಣರಂಗಭೂಮಿಯೊಳ್ ॥೭॥

ಂದಿನ ಅಸ್ತಮಯದೊಳಗೆ ಶತ್ರುವನ್ನು ಕೊಲ್ಲದೆ ಬಿಟ್ಟರೆ, ಅವನು ಮುಂದೆ ಸಾಧ್ಯನಾಗುವನು, ಬಲರಾಮನು ಬಂದು ಅವನನ್ನು ಕೂಡುವನು. ಗೆಲಲ್ ಬಂದಪುದೆ ಬಳಿಕ್ಕೆ' ಎಂದು ನಾರಾಯಣನು ನುಡಿಯಲು, ುಳೆಗಾಲದ ರಾತ್ರಿಯಲ್ಲಿ ಚಕಚಕಿಸುವ ಮಿಂಚಿನಂತೆ ಹೊಳೆಯುವ ನೋಟ ಳಿಂದ ದಿಕ್ಕುಗಳನ್ನು ನುಂಗುವಂತೆ ಮುಳಿದು ನೋಡಿ, ಜರಾಸಂಧ-ಸಂಧಿ- ಂಧನ-ವಿಘಟನನಾದ ಭೀಮನು

॥ ಕಡಲಂ ಪೊಕ್ಕೊಡೆ ಪೀರ್ದಪೆಂ ಕಡಲನಾಪಾತಾಳಮಂ ಪೊಕ್ಕನ।
ಪ್ಪೊಡೆ ಶೇಷಾಹಿಯ ಪಲ್ಗಳಿಂ ಮುರಿದಪೆಂ ಬಹ್ಮಾಂಡಮಂ ಪೊಕ್ಕನ॥
ಪ್ಪೊಡಮಾ ಬ್ರಹ್ಮನ ಗಂಟಲಂ ಮುರಿದಪೆಂ ದುರ್ಯೋಧನಂ ತಾಂ ಪುಗ।
ಲ್ಕೆಡೆಯಾ ತ್ರೈಭುವನಂಗಳಿಂ ಪೊರಗೆ ಮತ್ತೆಲ್ಲಿತ್ತೊ ಬಾಣಾಂತಕಾ ॥೭೬॥

ಡಲನ್ನು ಸೇರಿದ್ದರೆ, ಅದನ್ನು ಹೀರಿ ಕುಡಿಯುವೆನು. ಪಾತಾಳದಲ್ಲಿ ಹೋಗಿ

ಪ್ಪಾದರೆ, ಶೇಷನ ಹಲ್ಲುಗಳನ್ನು ಮುರಿಯುವೆನು. ಬ್ರಹ್ಮಾಂಡವನ್ನಾಶ್ರಯಿಸಿದ್ದರೆ, ಬ್ರಹ್ಮನ ಗಂಟಲವನ್ನೊತ್ತುವೆನು. ಈ ಮೂರು ಲೋಕಗಳನ್ನು ಬಿಟ್ಟು ಹೋಗಲು ಅವನಿಗೆ ಎಡೆಯೆಲ್ಲಿ? ಎಂದು ವೀರಾವೇಶದಿಂದ ನುಡಿದನು. ಇಷ್ಟರಲ್ಲಿಯೇ ವೃಕೋದರನಟ್ಟಿದ ವಿಂಧ್ಯಕನೆಂಬ ಕಿರಾತನು ಬಂದು, 'ದುರ್ಯೋಧನನನ್ನು ಎಲ್ಲಿಯೂ ಕಾಣಲಿಲ್ಲ; ಆದರೆ ವೈಶಂಪಾಯನ ಸರೋವರಕ್ಕೆ ನೀರು ಕುಡಿಯಲೆಂದು ಹೋಗಿ ಕೊಳದ ತಡಿಯಲ್ಲಿ ಹಳ-ಕುಲಿಶ-ಶಂಖ-ಚಕ್ರ-ಲಾಂಛಿತವುಪ್ಪ ಕಾಲಿನ ಹೆಜ್ಜೆಯನ್ನು ಕಂಡು ಬಂದೆ' ನೆಂದು ಹೇಳಿದನು. 'ಅವನ ಮಾತಿನಲ್ಲಿ ಯುಕ್ತಿಯುಂಟು.' ಭೀಷ್ಮರ ಉಪದೇಶದಿಂದ ದುರ್ಯೋಧನನು ಕೊಳದೊಳಗೆ ಹೋಗಿ ಕಾಲವಂಚನೆಗೆಯ್ಯುತ್ತಿರುವನು. ಅತ್ತ ಕಡೆಗೆ ನಡೆಯಬೇಕೆಂದು ಅಂಬುಜನಾಭನು ನುಡಿದನು. ಅದರಂತೆ ಅಲ್ಲಿಗೆ ಹೋಗಿ ಶಂಖ ಚಕ್ರ-ಹಳ-ಕುಲಿಶ-ಲಾಂಛಿತಮಾಗಿರ್ದ ಅಡಿವಜ್ಜೆಯಂ ನೋಡಿ, ದುರ್ಯೋಧನನ ಹೆಜ್ಜೆಯೆಂದು ನಿಶ್ಚೈಸಿ, ಅವನನ್ನು ಹೊರಡಿಸಲು, ಅವರು ಕಲಕಲವನ್ನೆಬ್ಬಿಸಿದರು. ಶಂಖಗಳನ್ನೂದಿದರು; ಭೇರಿಗಳನ್ನು ಹೊಡಿಸಿದರು; ಎಲ್ಲವೂ ನಿಷ್ಫಲವಾಯಿತು. ಇದನ್ನು ನೋಡಿದೊಡನೆ ಭೀಮಸೇನನು ಜಲಚರಗಳ ಎದೆಯು ಪೌನ್ಪಸೆ ಪಾರುವಂತೆ ಸಿಂಹನಾದವನ್ನು ಮಾಡಿ,

ಮ॥ಸ್ರ॥ ಕಿರಿಯಂದಿಂದಿತ್ತ ದುರ್ಯೋಧನನೆನಿಸಿದ ವಿಕ್ರಾಂತಮೇನಾದುದೆತ್ತಂ।
ದಿರಿವುರ್ಕೆಲ್ಲಿತ್ತೊ ಪಾಂಚಾಳಿಯ ನೆಳೆವದಟೇನಾದುದೋ ಪೇರ್ಮೆವಾತೆಂ॥
ಧುರದೊಳ್ ನೀನಂತುಸಿರ್ದನಗೆ ನಗೆಯಂ ಮಾಡಿದೈ ಬಂದನೀತಂ।
ಪೆರನಲ್ಲಂ ದುರ್ಜಯಂ ಕೌರವ ಕುಲ ನಳಿನೀ ಕುಂಜರಂ ಭಿಮಸೇನಂ ॥೭೭॥
ಕುಡಿದೆಂ ದುಃಶಾಸನೋರಃಸ್ಥಳ ವಿಗಳದಸೃಗ್ ವಾರಿಯಂ ಕಂಡದಂ ಮು।
ನ್ನಡೆ ನೋಡುತ್ತಳ್ಕಿ ಮಾಣ್ದೈ ನಿನಗಿರಿವದಟಂ ಕೊಟ್ಟೆರಾರಿಂದು ಮಾಣ ॥
ಲ್ಕೆಡೆಯುಂಟೇ ಸಿಲ್ಕಿದೈ ಪೋ ಪೊರಮಡು ಕೊಳದಿಂ ಸತ್ತೊಡಂ ಸುಟ್ಟು ನಿನ್ನೀ।
ಗಡೆ ದಲ್ ಕೊಂದಪ್ಪೆನೆನ್ನಂ ಮುಳಿಯಿಸಿ ನಿನಗಿಂ ದ್ರೋಹ ಬಾಳ್ವಾಸೆಯುಂಟೇ ॥೭೮

ಕಂ॥ ಮಾನಸಿಕೆಯಿಂ ದೊರೆಗಿಡೆ ನೀ ।
ರ್ಮಾನಿಸನೆನೆ ನೀರೊಳೆಲವೊ ನೀನಾಂ ಮಿಾನೆಂ ॥
ದೀನೆವಿದಿರ್ದಯಿಂದೇನಭಿ ।
ಮಾನದ ಕಲಿತನದ ಪರಮಪದಮೆಯ್ದಿದೆಯೋ ॥೭॥

ಚಂ॥ ಅದಟಿನಳುರ್ಕೆಯಂ ನಿರಿಸಿ ನಿನ್ನ ನಿಷೇಕದ ಪೊಳ್ತು ತಪ್ಪಲೀ ।
ಯದೆ ಪೊರವಟ್ಟು ಬಾ ತಡೆಯದೀಗಳೆ ನೀನಿನಿಸಿರ್ದಯಪ್ಪೊಡೇ ॥
ಕೊದಳೊ ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂ ಬರಂ ।
ಬೆದಕಿಯುಮೆಂತು ಮಪ್ಪಳಿಸಿ ಕೊಂದಪೆನೇಳ್ವುದಿದೇಂ ಸುಯೋಧನಾ ॥

ಚಕ್ಕಂದಿನಿಂದಿತ್ತ ದುರ್ಯೋಧನ (ಯುದ್ಧದಲ್ಲಿ ಜಯಿಸಲಸಾಧ್ಯ) ನೆನಿಸಿದ ನಿನ್ನ ಶೌರ್ಯವು ಎಲ್ಲಿ ಅಡಗಿದೆ? ಶತ್ರುಗಳನ್ನು ಇರಿಯುವ ನಿನ್ನ ಸೊಕ್ಕೊ! ಅದೆಲ್ಲಿ? ಪಾಂಚಾಲಿಯನೆಳೆವಾಗಿನ ಪರಾಕ್ರಮವಳಿಯಿತೇ? ಸಂಗ್ರಾಮ ಭೂಮಿಯಲ್ಲಿ ನೀನು ಎದೆಗಾರನಂತೆ ನುಡಿದಿ. ಆದರೆ ಈಗಿನ ನಿನ್ನ ವೃತ್ತಿಯನ್ನು ನೋಡಿ, ನನಗೆ ನಗೆ ತಡೆಯದಾಗಿದೆ. ಇಕೊ! ನೋಡು ಕೌರವ ಕುಲ ಕೋಲಾಹಲನಾದ ಭೀಮಸೇನನು ಬಂದಿರುವನು. ನೀವೆಲ್ಲರೂ ನೋಡುತ್ತಿರಲು, ದುಃಶಾಸನನ ವಕ್ಷಃಸ್ಥಳದಿಂದ, ಧಾರಾಳವಾಗಿ ಸುರಿಯುವ ರಕ್ತಜಲವನ್ನು ಕುಡಿದೆನು. ನಿನಗೆ ಇರಿಯುವ ಸಾಮರ್ಥ್ಯವಿದ್ದರೆ, ಹೇಡಿಯೇ, ನೀನೇಕೆ, ತಮ್ಮನ ನೆರವಿಗೆ ಓಡಲಿಲ್ಲ! ಈಗ ನೀನು ನನ್ನ ಕೆಯ್ಯಲ್ಲಿ ಸಿಕ್ಕಿರುವಿ. ಕೊಳದಿಂದ ತೀವ್ರವಾಗಿ ಹೊರಗೆ ಹೊರಡು. ಎಲೈ ನೀಚನೇ ಇನ್ನೂ ನಿನಗೆ ಬಾಳುವ ಆಸೆಯೇ? ಜಲಚರದಂತೆ ನೀರೊಳಗೇಕೆ ಅಡಗಿರುವಿ? ಇದೇನು ಅಭಿಮಾನದ ಕಲಿತನದ ವರ್ತನವೋ? ಸರೋವರದಿಂದ ಹೊರಡದೆ ನೀನು ಇನ್ನು ತಡೆದೆಯಾದರೆ, ನೀರು ತುಳ್ಕಿ ರಸಾತಳದ ಹಾದಿಯನ್ನು ಹುಡುಕಿ ಹಿಡಿಯುವಂತೆ ಅದನ್ನು ಅಪ್ಪಳಿಸಿ ನಿನ್ನನ್ನು ಕೊಲ್ಲುವೆನು; ಏಳು ಎಂದು ಸಾಹಸಭೀಮನು ಗರ್ಜಿಸಿದನು. ಪ್ರಳಯಕಾಲ ಜಲಧರ ಗರ್ಜಿತದಂತಿದ್ದ ಭೀಮನ ಭೀಮಗರ್ಜಿತವನ್ನು ಕೇಳಿ ರಾಜರಾಜನು ಸೈರಿಸದೆ ಚಿತ್ತಸ್ಖಲನೆಯಾಗಿ, ಜಳಸ್ತಂಭಮಂತ್ರವೆಲ್ಲವೂ ಮಾಯಾಮಂತ್ರವಾಗಲಾಗಿ, ಹಗೆಯು ಬಂದು ಇಂತು ಮೂದಲಿಸಲು ಸುಮ್ಮನೆ ನೀರೊಳು

ಮುಳುಗಿರ್ದೊಡೆ, 'ಕಿಡುಗುಂಮುಚ್ಛೌರ್ಯಂ' ಎಂದು ದುರ್ಯೋಧನನು (ಅಭಿಮಾನದ ತೇಜವು ಮುಖವನ್ನು ಬೆಳಗುತ್ತಿರಲು), ಸರೋವರದಿಂದ ಉದ್ಧತವಾಗಿ ಮೇಲಕ್ಕೆ ನೆಗೆದನು. ಕವಿಯು ಫಣಿರಾಜಕೇತನನ ನೆಗೆಯುವಿಕೆಯನ್ನು,

ಚಂ॥ ನೆಗೆಯೆ ಪೊದಳ್ದ ಬೊಬ್ಬುಳಿಕೆಗಳ್ ನೆಗೆದಂತೆರಡುಂ ಕೆಲಕ್ಕೆ ನೀ।
ರುಗಿಯೆ ಗದಾಭಿಘಾತ ಪರಿಪೂರಿತ ತೋಯಜ ಷಂಡಮಲ್ಲಿಗ॥
ಲ್ಲಿಗೆ ಕದಡೇಳೆ ಭೀಮ ಭುಜ ಮಂದರ ಘಟ್ಟಣೆಯಿಂದ ಮಲ್ಲಿ ಕೊ।
ಟ್ಟಗೆ ಕೊಳೆ ಕಾಳಕೂಟ ಮೊಗೆವಂತೊಗೆದಂ ಫಣಿರಾಜಕೇತನಂ ॥೮೨॥

ಎಂದು ಮನೋಹರವಾಗಿ ವರ್ಣಿಸಿದ್ದಾನೆ. 'ಕಾಳಕೂಟ ಮೊಗೆವಂತೆಂ' ಬುದು ಎಷ್ಟು ಅರ್ಥ ಗರ್ಭಿತವಾದುದಿರುತ್ತದೆಂಬುದನ್ನು ನೋಡಿರಿ. ಅಂತು ನೆಗೆದು ದಿಗ್ಗಜದ ಸೊಂಡಿಲಿನ ಪ್ರಮಾಣವುಳ್ಳ ರೌದ್ರ ಗದಾದಂಡವನ್ನು ಧರಿಸಿ, ಪ್ರಚಂಡನಾಗಿ ಕೊಳದಿಂ ಪೊರಮಟ್ಟು ಬರ್ಪ ಅಭಿಮಾನೋಜ್ವಲನಾದ ದುರ್ಯೋಧನನ್ನು ಧರ್ಮಪುತ್ರನು ನೋಡಿ,

ಚಂ॥ ನಡಪಿದ ನಂಟರೆಯ್ದೆ ಪೊರೆದಾಳ್ ರಣರಂಗದೊಳುಳ್ಳರೆಲ್ಲರುಂ।
ಮಡಿದೊಡಮುರ್ಕ ಗುಂದದುಗುರಂತೆರಡುಂ ಕಡೆತಪ್ಪ ಕೂರ್ಪನೋ॥
ಗಡಿಸದೆ ತಾಳ್ದಿ ಮೆಯ್ಯೊಳೆ ವೃಕೋದರನೊಂದೆ ಸರಕ್ಕೆ ಕಾಯ್ಪೊಡಂ।
ಬಡೆ ಸಿಡಿಲೇಳ್ಗೆಯಿಂ ಮಸಗಿ ಬಂದನಿದೇಂ ಕಲಿಯೋ ಸುಯೋಧನಂ ॥೮೩॥

ಎಲ್ಲರೂ ರಣರಂಗದಲ್ಲಿ ಮಡಿದರೂ ಕೂಡ, ಇವನ ಅಭಿಮಾನದ ದರ್ಪವು ಅಡಗಿಲ್ಲ; ಶೌರ್ಯದ ಕಾಂತಿಯು ಕೆಂದಿಲ್ಲ ; ವೃಕೋದರನ ಒಂದೆ ಸರಕ್ಕೆ ಸಿಡಿಲ್ ಬರುವಂತೆ ಬಂದನು. 'ಇದೇಂ ಕಲಿಯೋ ಸುಯೋಧನಂ' ಎಂದು ನುಡಿದನು. ಪಂಪನು ಈ ನುಡಿಗಳನ್ನು ಬರೆಯುವಾಗ, ದುರ್ಯೋಧನನ ಶೌರ್ಯದ ಔಜ್ವಲ್ಯಕ್ಕೆ ಮುಗ್ಧನಾಗಿ ತಲೆದೂಗಿರಬಹುದು. ಇರಲಿ; ಮೇಲೆ ಬಂದೊಡನೆ ದುರ್ಯೋಧನನು ಪಾಂಡುತನಯರಿಗೆ,

ಮ॥ ಎಳೆ ಮುಂ ದೈತ್ಯನ ಕೆಯ್ಗೆ ಪೋಗೆ ತರಲೆಂದೀ ಚಕ್ರಿ ಮುನ್ನಂ ರಸಾ।
ತಳಮಂ ಪೊಕ್ಕುದು ಮಿಾ ಮಹೋಗ್ರರಣದೊಳ್ ನಿಮ್ಮೊಂದು ಕೆಯ್ಪಿಳ್ದ
ಭೂ।
ತಳಮಂ ಮತ್ತೆ ತರಲ್ ವಿಶುದ್ಧ ನಿಯಮ ಪ್ರಾರಂಭದಿಂದಾನುಮೀ।
ಕೊಳನಂ ಪೊಕ್ಕುದು ಮಾವ ದೋಷಮೆನಗಿಂ ಪೂರಾಂಪರಾರ್
ಕೋರಿರೇ ॥೪೪॥

ಹಿಂದಕ್ಕೆ ಪೃಥ್ವಿಯು ದೈತ್ಯ (ಹಿರಣ್ಯಾಕ್ಷ)ನ ಕೈಸೇರಲು, ಚಕ್ರಿಯು (ವಿಷ್ಣುವು) ವರಾಹಾವತಾರವನ್ನು ತಳೆದು ರಸಾತಳವನ್ನು ಪ್ರವೇಶಿಸಿ, ಭೂತಳೋದ್ಧಾರವನ್ನು ಮಾಡಿದನು. ಈ ಮಹಾ ಯುದ್ಧದಲ್ಲಿ ನಿಮ್ಮ ಕೆಯ್ಪಿಳ್ದ ಭೂತಳವನ್ನು ಮತ್ತೆ ತರಲು ಕೊಳದಲ್ಲಿ ಸೇರಿ ವಿಶುದ್ಧ ನಿಯಮಗಳನ್ನು ಪ್ರಾರಂಭಿಸಿದ್ದೆನು. ಕೊಳವನ್ನು ಸೇರಿರುವದಕ್ಕೆ ಇದುವೆ ಕಾರಣವು. ಇದರಲ್ಲಾವ ದೋಷವು? 'ಶತ್ರುಗಳೇ, ನುಡಿಯಿರಿ' ಎಂದು ದರ್ಪೋದ್ರೇಕದಿಂದ ಮಾತಾಡಿದನು. ಎಂಬುದಕ್ಕೆ ಧರ್ಮಪುತ್ರನು.—

ಮ॥ ಬಿಸುಡಿನ್ನುಪ್ಪೊಡಮೀವಮಂ ಧರಣಿಯಂ ಪಟ್ಟಾಳ್ವಮೇನಪ್ಪುದೀ।
ಕಿಸುರೊಳ್ ಕೆಮ್ಮನೆ ಪಾಪಕರ್ಮ ಚಲಮಂ ಕೊಂಡಾಡದೆಮ್ಮಯ್ವರುಂ॥
ಬೆಸಕೆಯ್ಯುತ್ತಿರೆ ನೀನೆ ಮೇಣರಸುಗೆಯ್ ಸೌಂದರ್ಯದಿಂತೊಳ್ಳಿತೈ।
ವಸುಧಾಮಂಡಳಮಿಂಬುಕೆಯ್ವುದಿದನಾಂ ಕೆಯ್ಮುಗ್ದಿದೆಂ ಬೇಡಿದೆಂ॥೪೫॥

ಇನ್ನು ಮೇಲಾದರೂ ಚಲವನ್ನು ಬಿಡು. ನಾವು ಆಯ್ವರೂ ನೀನು ಹೇಳಿದಂತೆ ನಡೆಯುವೆವು. ನೀನೇ ಅರಸನಾಗಿ ಭೂಮಂಡಲವನ್ನು ಪಾಲಿಸು. ಇದರಿಂದ ಒಳಿತಾಗುವದು ಎಂದು ಬೇಡಿಕೊಂಡನು. 'ನೀನು ಆಯ್ದು ಹಳ್ಳಿಗಳನ್ನು ಕೊಡಲೊಪ್ಪಲಿಲ್ಲವಾದುದರಿಂದ, ನಿನಗೆ ಈ ಪರಿಸ್ಥಿತಿಯು ಪ್ರಾಪ್ತವಾಯಿತು. ಆದುದರಿಂದ ಧರ್ಮತನುಜನು ಪೇಳ್ದುದಕ್ಕೆ ಒಪ್ಪಿಕೊಳ್ಳೆ'ಂದು ಶ್ರೀಕೃಷ್ಣನು ಅದಕ್ಕನುಬಲವಾಗಿ ನುಡಿದನು. ದುರ್ಯೋಧನನು 'ಆ ಮಾತಂ ಕೆಳಗಿವಿಗೆಯ್ದು' ತನ್ನ ಗದಾದಂಡವನ್ನು ಭುಜಾದಂಡದೊಳಳವಡಿಸಿ,

ಕಂ॥ ಮುನ್ನಿಮ್ಮ ಪೇಳ್ದ ಗೆಯ್ಯದೆ ।
ನಿನ್ನೀ ಪದದಲ್ಲಿ ಪೇಳ್ದಗೆಯ್ವಂತುಂಟೇ ।
ಪನ್ನಗಪತಾಕ ನಲ್ಲೆನೆ ।
ಬಿನ್ನಣವಡೆ ಮಾತನೆನ್ನೊಳಿಂ ನುಡಿಯದಿರಿಂ ॥೮೭॥

ಶಾ॥ ಆ ದುಃಶಾಸನನಂ ಪೊರಳ್ಚಿ ರಣದೊಳ್ ಕೊಂದೀ ಮರುತ್ ಪುತ್ರನಿಂ ।
ತಾದಂ ದಳ್ಳಿಸೆ ನೋಡಿ ನೋಡಿ ಪುದುವಾಳೆಂತಕ್ಕುಮಿಂತೀ ಗಳಾ ॥
ನಾದೆಂ ಮೇಣವನಾದನೇಕೆ ತಡೆವಿರ್ಕೆಯ್ವೊಯ್ದುವಿನ್ನೀಂ ಕರಂ।
ಸೌದರ್ಯರ್ಗಂ ಕನಲ್ವಂ ನೋಡಿಂತಿ ನಿಬರುಂ ಕಾದಿಂ ಭರಂಗೆಯ್ದಪೆಂ॥೮೮॥

ಮುನ್ನ ನೀವು ಹೇಳಿದುದನ್ನು ಮಾಡದ ನಾನು, ಇನ್ನು ಮೇಲೆ ನೀವು ಹೇಳಿದುದಕ್ಕೆ ಒಪ್ಪುವೆನೇ? ಇಂತಹ ಮಾತುಗಳನ್ನು ನನ್ನಲ್ಲಿ ನುಡಿಯ ಬೇಡಿರಿ. ದುಃಶಾಸನನ್ನು ಕೊಂದ ಮರುತ್ ಪುತ್ರನನ್ನು (ಭೀಮನನ್ನು) ನೋಡಿದೊಡನೆ, ನನ್ನ ಅಂತರಂಗದಲ್ಲಿ ಕ್ರೋಧಾಗ್ನಿಯು ಪ್ರಜ್ವಲಿತವಾಗುತ್ತದೆ. ಆವೇಶವು ನನ್ನಲ್ಲಿ ತುಂಬುತ್ತದೆ. ಇಂಥ ಸ್ಥಿತಿಯಲ್ಲಿ ಸಂಧಿಯಾಗಬಹುದೋ? ನನ್ನನ್ನೂ ಅವನನ್ನೂ ಬಿಟ್ಟುಬಿಡಿರಿ. ಎಲ್ಲರನ್ನೂ ಯುದ್ಧದಲ್ಲಿ ತೀವ್ರವಾಗಿ ನಾಶಪಡಿಸುವೆನೆಂದನು.

ಅಷ್ಟರಲ್ಲಿ ತೀರ್ಥಯಾತ್ರೆಯಲ್ಲಿ ತೊಡಗಿ ತಡೆದ ಬಲದೇವನು 'ದುರ್ಯೋಧನಂಗಾಯುಂ ಬರ್ಪಂತೆ', ಹೆಗಲಿನಲ್ಲಿ ಹಲಾಯುಧಮನಿಕ್ಕಿಕೊಂಡು, ಜಂಗಮಪರ್ವತವೆಂಬಂತೆ ಬಂದನು. ತನಗೆ ನಮಸ್ಕರಿಸಿದ ದುರ್ಯೋಧನನನ್ನು ಪ್ರೇಮದಿಂದ ತಬ್ಬಿಕೊಂಡು, ಅವನ ಸ್ಥಿತಿಯನ್ನು ನೋಡಿ ಶೋಕಪರವಶನಾಗಿ ಗದ್ಗದಕಂಠದಿಂದ 'ಇದೇನೆ'ಂದು ಮುರಾಂತಕನಿಗೆ ಸಿಟ್ಟಿನಿಂದ ಕೇಳಲು, ಅಣ್ಣನ ಮುನಿದ ಮೊಗವನ್ನು ನೋಡಿ, ಮಧುಮಥನನಾದ ಶ್ರೀಕೃಷ್ಣನು,

ಚಂ॥ ಮುಳಿಪೊಡಮೆಯ್ದೆ ಕೇಳ್ದು ಮುಳಿ ಪಾಂಡುತನೂಜರಮುನ್ನಿನಾಳ್ದ ಭೂ।
ತಳಮನದೆಂತುಮೀಯದೆ ಸುಯೋಧನನುದ್ಧತ ವೃತ್ತಿಯಿಂ ಸುಹೃ॥
ಜ್ಜಳಮುಳಿದಳ್ಗಿಯಿಂದೆ ಪುದುವಾಳ್ಕೆಗೊಡಂಬಡಲೊಲ್ಲದಿನ್ನುಮಂ ।
ಮ್ಮಳಿಸುವನೀಗಳಾತನನೆ ನೀಂ ಬೆಸಗೊಳ್ ಪುಸಿಯಂ ಸುಯೋಧನಂ॥೮೯॥

ಸಿಟ್ಟಾಗಬೇಕಾದರೆ ಪೂರ್ವಾಪರ ವಿಚಾರವನ್ನು ಮಾಡಿ ಸಿಟ್ಟಾಗು. ಸುಯೋಧನನು ಉದ್ಧತವೃತ್ತಿಯಿಂದ ಪಾಂಡವರಿಗೆ ಅವರ ರಾಜ್ಯವನ್ನು ಒಪ್ಪಿಸಲಿಲ್ಲ. ಈಗ ಅವನಿಗೆ ಅಳತೆಯಿಲ್ಲದೆ ಹಾನಿಯಾಗಿದೆ. ಬಾಂಧವರೂ, ಮಿತ್ರರೂ, ಆಪ್ತರೂ ಎಲ್ಲರೂ ನಾಶವಾಗಿದ್ದಾರೆ. ಅವನು ಇನ್ನು ಒಡಂಬಡಿಕೆಗೆ ಸಿದ್ಧನಿರುವದಿಲ್ಲ. ದುರ್ಯೋಧನನು ಸುಳ್ಳನಾಡುವದಿಲ್ಲ; ಬೇಕಾದರೆ ಕೇಳಿಕೊಳ್ಳೆಂದು ಹೇಳಿದನು. ಹೀಗೇಕೆ ಮರುಳ್ತನವನ್ನು ಮಾಡಿದೆಯೆಂದು ಹಲಾಯುಧನು ದುರ್ಯೋಧನನಿಗೆ ಕೇಳಲು, ಅವನು,

ವು॥ ಹರಿಯೆಂದಂದವುದಂತೆ ಪಾಂಡುತನಯುರ್ ನಿರ್ದೋಷಿಗಳ್ ಶಥ್ಯಮಿಂ
ತು ರಣಸ್ಥಾನದೊಳಿನ್ನೆರಳ್ ನುಡಿವೆನೇ ಮದ್ಬಂಧು ಶೋಕಾಗ್ನಿಯಿಂ।
ದುರಿಡಪ್ಪೆಂ ತೊಡರ್ದೆನ್ನನಿಂ ಬಿಡು ವಿರೋಧಿಕ್ಷ್ಮಾಪರೆನ್ನೀ ಗದಾ।
ಪರಿಘಾಘಾತದಿನಳ್ಗಿ ತಳ್ಗಿಯುಚಿದಿನ್ನಳ್ಕಾಡದೇಂ ಪೋಪರೇ ॥೯೦॥

ಹರಿಯು ನುಡಿದುದು ನಿಜವು; ಪಾಂಡುತನಯರು ನಿರ್ದೋಷಿಗಳು. ರಣರಂಗದಲ್ಲಿ ನಿಂತು ನಾನು ಸುಳ್ಳಾಡೆನು. ಆದರೆ ನನ್ನ ಬಂಧುಗಳ ಮರಣದಿಂದುಂಟಾದ ಶೋಕಾಗ್ನಿಯಿಂದ ನಾನು ಸಂತಪ್ತನಾಗಿರುವೆನು. ನನ್ನನ್ನು ಬಿಡು. ಈ ಗದೆಯ ಪ್ರಚಂಡವಾದ ಹೊಡತಗಳಿಂದ ವಿರೋಧಿನೃಪರನ್ನು ನುಗ್ಗು ನುಗ್ಗು ಮಾಡಿಬಿಡುವೆನೆಂದು ಬಲದೇವನಿಗೆ ಸ್ಪಷ್ಟವಾಗಿ ತಿಳುಹಿದನು. ಸಂಕರ್ಷಣನು ದುರ್ಯೋಧನನ **ಮನದ ಉತ್ಕರ್ಷತೆ**ಯನ್ನರಿದು ಇನ್ನೆನಗೆ ನುಡಿಯಲೆಡೆಯಿಲ್ಲ. ಧರ್ಮಯುದ್ಧವನ್ನು ನೋಡಬೇಕೆಂದು ಧರ್ಮರಾಜನ ಕಡೆಗೆ ತಿರುಗಿ, ನಿಮ್ಮಯ್ವರಲ್ಲಿ ಓರ್ವನು ಈತನೊಡನೆ ಕಾದುವುದು; ಕಾದಿ ಸೋತನೆಂದರೆ ದುರ್ಯೋಧನನು ನೆಲನನಾಳ್ವನು; ಉಳಿದ ನಾಲ್ವರು ಆತನ ಆಜ್ಞೆಯಲ್ಲಿರಬೇಕೆಂದೆನ್ನಲು, ಭೀಮನು ನಾನು ಮಹಾಪ್ರತಿಜ್ಞೆಯನ್ನು ತೊಟ್ಟಿದುದರಿಂದಲೂ ಕೌರವಾಧೀಶ್ವರನ ಕೋಪವು ನನ್ನ ಮೇಲೆ ಅಧಿಕವಾಗಿರುವದರಿಂದಲೂ, ಅವನನ್ನು ನನ್ನೊಡನೆ ಕಾದಲು ಬಿಡಿರೆಂದು ಹೇಳಿ ನಯದಿಂದ ಬಲರಾಮನನ್ನೊಡಂಬಡಿಸಿದನು. ತದನುಸಾರವಾಗಿ ಎಲ್ಲರೂ ಸಂಗ್ರಾಮಾಂಗಣಕ್ಕೆ ಬಂದರು. ಅಲ್ಲಿ

ಅತ್ಯುಗ್ರಗದಾಧಾರಿಗಳಾದ ಭೀಮ ದುರ್ಯೋಧನರಿರ್ವರು ಒಬ್ಬರನ್ನೊಬ್ಬರು ಮೂದಲಿಸಿ ಮೂವತ್ತೆರಡು ಪ್ರಕಾರದ ಗದಾವಿಕ್ಷೇಪಗಳಿಂದ ಕಾದಲಿಕ್ಕೆ ಹತ್ತಿದರು. ಆಗ

ಮ॥ ಮೊದಲಿಂ ಕಿಳ್ತು ಕುಳಾಚಳ ಪ್ರತತಿಗಳ್ ಪೊಟ್ರೇದ್ಧದ್ ಗದಾಘಾತವಾ।
ತದಿನಾಕಾಶಮನೆಯ್ದೆ ತೂಳ್ದಿ ಕವಿತಂದಂಬೋಧಿಯೊಳ್ ಸೂಳಸೂ॥
ೞದೆ ಬೀೞ್ತಂದುವು ಬತ್ತಲಾಟಿಸಿದುವುವಾವಾರಾಶಿಗಳ್ ಸುರ್ಕಿ ಬಿ।
ಕ್ಕಿದ ಬಾಯಂತೆ ಸುರುಳ್ದುದಂಬರಮಿದೇಂ ಪೆಂಪೋ ಗದಾಯುದ್ಧದಾ ॥೯೨॥

ಪ್ರಚಂಡ ಗದಾಘಾತಗಳಿಂದ ಉತ್ಪನ್ನವಾದ ಪ್ರಬಲವಾಯುವಿನಿಂದ ಕುಲಾಚಲಗಳೆಲ್ಲ ಮೂಲದಿಂದ ಕಿತ್ತು ಆಕಾಶಕ್ಕೆ ನೆಗೆದು ಕವಿತಂದು ಸಮುದ್ರದಲ್ಲಿ ಬಿದ್ದವು; ಸಮುದ್ರಗಳು ಬತ್ತಿದವು; ಸುಕ್ಕಿಕೊಂಡು ಬಿಕ್ಕಿದ ಬಾಯಂತೆ ಅಂಬರವು ಸುಕ್ಕಿಕೊಂಡಿತು. '**ಇದೇಂ ಪೆಂಪೋ ಗದಾಯುದ್ಧದಾ.**'

ಇಂತು ದುರ್ಯೋಧನ ಭೀಮಸೇನರ ಗದಾಯುದ್ಧವು ಮಹಾಭೈರವವಾಗಿರಲು, ದುರ್ಯೋಧನನು ವಿದ್ಯಾಧರರಣದೊಳತಿ ಪರಿಚಿತನಪ್ಪುದರಿಂದ ಆಕಾಶಕ್ಕೆ ನೆಗೆದು,

ಕಂ॥ ಸಿಡಿಲೆರಗುವಂತೆ ಭೋರೆಂ।
ದೊಡನೆರಗಿ ಮಹೋಗ್ರ-ಘನ-ಗದಾ-ಪರಿಘದಿನಾ॥
ರ್ದಡಗಿಡೆ ಪೊಯ್ದೊಡೆ ಭೀಮಂ।
ಕೆಡೆದಂ ಧರೆ ನಡುಗೆ ನೀಳಕುತ್ಕೀಳಂ ಬೊಲ್ ॥೯೩॥

ಸಿಡಿಲೆರಗುವಂತೆ ಭೋರೆಂದೊಡನೆರಗಿ ಮಹಾ ಪ್ರಚಂಡವಾದ ಗದೆಯಿಂದ ಭೀಮನನ್ನು ಹೊಡೆಯಲು ಧರೆಯು ನಡುಗುವಂತೆ ಅವನು ನೆಲದ ಮೇಲೆ ಬಿದ್ದನು. ಗದಾ ಪ್ರಹರಣದಿಂದ ಅಚೇತನನಾಗಿದ್ದ ಭೀಮನನ್ನು ಇರಿಯೆನೆಂದು ಆಕಾಶ ಮಾರ್ಗದಲ್ಲಿ ಅಲ್ಪಾಂತರದೊಳ್ ಸುಯೋಧನನು ಗದೆಯನ್ನು ಬೀಸುವಾಗ, ಅದರ ಗಾಳಿಯಿಂದ ಭೀಮನು ಮೂರ್ಛೆ ತಿಳಿದೆದ್ದು,

ಧರಾತಳದಲ್ಲಿ ಸೂಸಿದ ತನ್ನ ಗದಾದಂಡವನ್ನು ಭುಜಾದಂಡದಲ್ಲಿಳವಡಿಸಿಕೊಂಡನು. ಆಗ ಅಂಬುಜೋದರನು ಒಂದು ಸೆವದಿಂದ ಸುಯೋಧನನ ತೊಡೆಯನ್ನು ಹೊಡೆಯೆಂದು ಭೀಮನಿಗೆ ಸೂಚಿಸಲು, ಅವನು ಭೋರೆಂದು ಉಗ್ರಾರಾತಿಯ ತೊಡೆಗಳಿಗೆ ಹೊಡೆಯಲು, ಗದಾಘಾತದಿಂದ ಅವುಗಳು ಮುರಿದು ನುಚ್ಚು ನೂರಾಗಿ, ಅವನು (ದುರ್ಯೋಧನನು) ಭೂಮಿಯ ಮೇಲೆ ಬಿದ್ದನು. ಅವನು 'ಕೆಡೆದುದನ್ನು ಪಂಪನು ಹೀಗೆ ವರ್ಣಿಸಿದ್ದಾನೆ.

ಮ॥ಸ॥ ನೆರನೀತಂಗೂರುಯುಗ್ಮಂ ನೆರನನರಿಯದಾನಿನ್ನೆಗಂ ಮಾಣ್ದೆ
ನಿಂಪೋ।
ತೆರಪಂ ಪಾರ್ದಿರ್ಪೆನೆಂದ್ಗೊಯ್ಯನೆ ಗದೆಯನಣಂ ಪಾಡುಗೆಯ್ದಿರ್ದುದರ್
ಭೋರೆಂ॥
ದೆರಪುಗ್ರಾರಾತಿಯೂರುದ್ವಯಮನಿಡೆ ಗದಾಘಾತದಿಂ ದೂರು
ಯುಗ್ಮಂ।
ಮುರಿದೆತ್ತಂ ನುಚ್ಚುನೂರಾಗಿರೆ ಕೆಡೆದನಿಳಾ ಭಾಗದೊಳ್ ಧಾರ್ತ
ರಾಷ್ಟ್ರಂ ॥೯೬॥

ಚಂ॥ ನುಡಿದುದನೆಯ್ದೆ ತುತ್ತತುದಿಯೊಯ್ದುವಿನಂ ನುಡಿದಂ ಚಲಂ ಚಲಂ।
ಬಿಡಿದುದನೆಯ್ದೆ ಮುಂ ಪಿಡಿದುದಂ ಸಲೆ ಪೂಣ್ದು ಪೂಣ್ಕೆ ನೇ॥
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ।
ಲ್ವಡುವಿನಮಣ್ಮುಗುಂದದೆನಲೇನಭಿಮಾನಧನಂ ಸುಯೋಧನಂ॥

ನುಡಿದ ನುಡಿಯನ್ನು ಕೊನೆಯ ವರೆಗೆ ನುಡಿದನು. ಕೈಕೊಂಡ ಚಲವನ್ನು ಕಡೆತನಕ ಪಾಲಿಸಿದನು. (ಹಿಡಿದ ಚಲವನ್ನು ಬಿಡಲಿಲ್ಲ). ತೊಟ್ಟ ಪ್ರತಿಜ್ಞೆಯನ್ನು ನಡೆಯುವವರೆಗೆ ನಡೆಯಿಸಿದನು. ಅಂಜದೆ ಹಿಂದೆಗೆಯದೆ ಧೈರ್ಯವನ್ನು ಬಿಡದೆ, ದೇಹವು ಬೀಳುವತನಕ ಹೆಣಗಿದನು. 'ಏನಭಿಮಾನಧನಂ ಸುಯೋಧನಂ' (ಕವಿಯು ಸುಯೋಧನನ ಅಭಿಮಾನಧನಲುಬ್ಧನಾಗಿದ್ದಾನೆ).

ನೆಲದ ಮೇಲೆ ಮೂರ್ಛಾಗತನಾಗಿ ಬಿದ್ದಿದ್ದ ಕುರುಕುಳ ಚೂಡಾಮಣಿಯನ್ನು ಭೀಮನು ಮುಟ್ಟಬರಲು, ಏಕಾದಶಾಕ್ಷೋಹಿಣೀಪತಿಯಪ್ಪ ರಾಜಾಧಿರಾಜನ ಅವಮಾನವನ್ನು ಮಾಡಬೇಡೆಂದು ಬಲರಾಮನು ನಿವಾರಿಸಲು, ಅವನು,

ಮ॥ಸ್ರ॥ ಇದರೊಳ್ ಮೂರ್ಧಾಭಿಷೇಕಂ ತನಗೆ ಗಡ ಸಮುಂತಾಯ್ತು ಪಿಂಛಾತಪತ್ರಂ।
ಪುದಿದೆತ್ತಂ ತಣ್ಣೆಳಲ್ ಮಾಡುವುದು ಗಡಮಿದೆಂತೆಂದು ಮಾರ್ಗ್ಗಪ್ರೌಡಂ ಪ॥
ವ್ಪಿದ ಗರ್ವ್ವೋದ್ರೇಕದಿಂ ಬಾಗದು ಗಡಮೆನುತುಂ ಮಾಣಿಕಂ ಸೂಸೆ ಬಲ್ಪಿಂ।
ಥೊರ್ದ್ದೆದಂ ಸಾರ್ತ್ತಂದು ದುರ್ಯೋಧನನ ಮಕುಟಮಂ ಕೋಪದಿಂ ಭೀಮಸೇನಂ ॥೯೮॥

ಇದರಲ್ಲಿಯೇ ನನಗೆ ಮೂರ್ಧಾಭಿಷೇಕೋತ್ಸಕವು; ಇದು ಛತ್ರದಂತೆ ನನಗೆ ತಂಪಾದ ನೆಳಲನ್ನುಂಟುಮಾಡುವುದು. ಇದು ಗರ್ವೋದ್ರೇಕದಿಂದ ಯಾರಿಗು ಬಾಗಿದುದಲ್ಲ' ಎನುತ್ತ ಭರದಿಂದ ದುರ್ಯೋಧನನ ಮುಕುಟವನ್ನು ಕೋಪದಿಂದೊದೆದನು.

ಒದೆವುದನ್ನೂ, ದುರ್ಯೋಧನನಿಗಾದ ಅವಸ್ಥೆಯನ್ನು ನೋಡಲಾರದೆಯೂ, ತನ್ನ ತಮ್ಮನ ಮನವನ್ನು ನೋಯಿಸಲರಿಯದೆಯೂ, ಬಲದೇವನು ಭಗ್ನಮನೋರಥನಾಗಿ ದ್ವಾರಾವತಿಗೆ ಹೋದನು.

ಭೀಮನ ವೇಣೀಸಂಹಾರ, ಊರುಭಂಗ, ಮುಕುಟಭಂಗಗಳೆಂಬ ಮಹಾ ಪ್ರತಿಜ್ಞೆಯು ಪೂರ್ಣವಾಯಿತು. ಶ್ರೀ ಕೃಷ್ಣನು ಕಾಲಕುಶಲನಿದ್ದುದರಿಂದ, ಅಶ್ವತ್ಥಾಮನಿಂದ, ಪಾಂಡವರಿಗೆ ಅಪಾಯವು ತಟ್ಟಬಾರದೆಂದು ಅವರನ್ನು ನೀಲಗಿರಿಗೊಡಗೊಂಡು ಹೋದನು. ಧೃಷ್ಟದ್ಯುಮ್ನ ಶಿಖಂಡಿ, ಚೇಕಿತಾನ, ಯುಧಾಮನ್ಯು, ಉತ್ತಮೌಜ ಇವರನ್ನೂ ಶ್ರುತಸೋಮಕ ಪ್ರಮುಖರಪ್ಪ ಪಾಂಡವರನ್ನೂ ಹಸ್ತಿನಪುರಕ್ಕೆ ಕಳುಹಿಸಿ

ದನು. ಇತ್ತ ಕೃಪ ಕೃತವರ್ಮಸಮೇತನಾದ ಅಶ್ವತ್ಥಾಮನು ಅಂದು ದುರ್ಯೋಧನ ನಿದ್ದೆಡೆಯನರಿಯದೆ, ಭೀಷ್ಮಾಚಾರ್ಯರಿಂದ ಅದನ್ನು ಅರಿತುಕೊಂಡು ಕೊಳಕ್ಕೆ ಬಂದು ಅಲ್ಲಿಯುಂ ಕಾಣದೆ ಕೊಳಗುಳದಲ್ಲಿ ಹುಡುಕುತ್ತ ಬರುತಿರಲು ತೊಟ್ಟನೆ ಇದಿರೊಳು



ಚಂ ॥ ಪಿಡಿದೆಡಗೆಯ್ಯ ಚಾಮರದ ದಕ್ಷಿಣಹಸ್ತದ ಪದ್ಮದೊಳ್ಪೊಡಂ ।
ಬಡೆ ನಸುಮಾಸಿ ಪಾಡಳಿದ ರೂಪಿನೊಳುಣ್ಮುವ ಗಾಡಿ ನಾಡೆ ಕ ॥
ಗ್ಗಡರೆ ತೊಡಂಕಿ ಪೀರಿದ ಕುರುಳ್ಗಳಿ ಚಿತ್ತದೊಳಾದ ಬೇಸರಂ ।
ನುಡಿವವೊಲಾಗೆ ಬರ್ಪ ಕಮಳಾಯತ ನೇತ್ರೆಯನಿಂದುವಕ್ತ್ರೆಯಂ ॥ ೯೯ ॥

ಎಡಗೆಯ್ಯಲ್ಲಿ ಚಾಮರವನ್ನೂ ಬಲಗೆಯ್ಯಲ್ಲಿ ಕಮಲವನ್ನೂ ಧರಿಸಿದವಳೂ, ಸ್ವಲ್ಪ ಮಾಸಿ ಕಲಾಹೀನವಾದ ರೂಪವುಳ್ಳವಳೂ, ತೊಡಕಾಗಿ ಅಸ್ತವ್ಯಸ್ತವಾದ ಕುರುಳುಗಳುಳ್ಳವಳೂ, ವಿಷಣ್ಣಮುಖವುಳ್ಳವಳೂ, ಕಮಲಗೊನೆಯಂತೆ ನೇತ್ರವುಳ್ಳವಳೂ ಆಗಿ ಬರುತಲಿರುವಂಥ ಸುಂದರಸ್ತ್ರೀಯನ್ನು ಕಂಡು ‘ ನೀನಾರು ಎಲ್ಲಿಗೆ ಪೋದಪೆ ’ ಎಂದು ಕೇಳಿದನು.

ಮ ॥ ಪೆಸರೊಳ್ ಲಕ್ಷ್ಮಿಯೆ ನಿನ್ನೆಗಂ ನೆಲಸಿ ತಾಂ ದುರ್ಯೋಧನೋರಸ್ಥಳಾ ।
ವಸಥಂ ದ್ರೋಣ-ನದೀಜ-ಕರ್ಣ-ಭುಜ-ವೀರ್ಯಾವೇಷ್ಟಿತಂ ಮಾಡಿ ಸಂ ॥
ತಸದಿರ್ದ್ದೆಂ ಬಿಸುಟಾ ಧರಾಧಿಪತಿಯಂ ನಾರಾಯಣಾದೇಶವೊ ।
ಡ್ಡಿಸೆ ಪಾಂಡುಪ್ರಿಯಪುತ್ರರೊಳ್ ನೆರೆಯಲೆಂದಿಂತೀಗಳಾಂ ಪೋದಪೆಂ ॥೧೦೦॥

ನಾನು ಲಕ್ಷ್ಮಿಯು. ದ್ರೋಣ, ಭೀಷ್ಮ, ಕರ್ಣ ಮೊದಲಾದವರ ಭುಜವೀರ್ಯದಿಂದ ರಕ್ಷಿತಳಾಗಿ ಇಷ್ಟು ದಿನ ದುರ್ಯೋಧನನ ವಕ್ಷಃಸ್ಥಳದಲ್ಲಿ ಸುಖವಾಗಿ ನೆಲಸಿದ್ದೆನು. ಈಗ ಆ ಧರಾಧಿಪತಿಯನ್ನು ಬಿಸುಟು ನಾರಾಯಣನ ಆಜ್ಞೆಯಿಂದ ಪಾಂಡವರಲ್ಲಿ ನೆಲಸಲು ಈಗ ನಾನು ಹೋಗುತಲಿರುವೆನೆಂಬುದನ್ನು ಕೇಳಿ ಅಶ್ವತ್ಥಾಮನು ಇಂತೆಂದನು.

ಚಂ ॥ ಪೊಸತಲರ್ದಂಬುಜಂಗಳೆಸಳೊಳ್ ನಡೆ ಪಾಡುವ ಪದ್ಮಯೋನಿಯೇ ।
ಪೊಸೆದೊಡೆ ಪುಟ್ಟಿದೈ ಮುರವಿರೋಧಿಯ ಪತ್ನಿಯೆ ಮಿಂಚುತಿರ್ಪ ಕೂ ॥

ರಸಿಗಳ ಮೇಲೆ ಸಂಚರಿಪೆ ವೈರಿನರಾಧಿಪಸೈನ್ಯವಾರ್ಧಿಯಂ ।
ಪೊಸೆದೊಡೆ ಪುಟ್ಟದೀ ನಿನಗೆ ವಕ್ರಿಸಲೆನ್ನನದೆಂತು ತೀಗ್ರ್ಗವೋ ॥ ೧೦೧ ॥

ಮ ॥ ಕುರುವಂಶಾಂಬರಭಾನುವಂ ಬಿಸುಡಿಸಲ್ಕಾನುಳ್ಳಿನಂ ತೀರದಾ ।
ನಿರೆ ನಾರಾಯಣನೆಂಬನುಂ ಪ್ರಭುವೆ ಪೇಳ್ ನೀನೀ ಮರುಳ್ಮಾತನಂ ॥
ಬುರುಹಾಕ್ಷೀ ಬಿಸುಡಂಜದಿರ್ ನಡೆ ಕುರುಕ್ಷ್ಮಾಪಾಳನಿರ್ದ್ದಲ್ಲಿಗೆಂ ।
ದರವಿಂದಾಲಯೆಯಂ ಮಗುಳ್ಚಿದನದೇನಾದ್ರ್‍ಔಣಿ ಶೌರ್ಯಾರ್ಥಿಯೋ ॥ ೧೦೨ ॥

(ನಾನಿರುವವರೆಗೆ ಕುರುವಂಶಗಗನಚಂದ್ರನಾದ ದುರ್ಯೋಧನನ್ನು ಬಿಸುಡುವುದು ಶಕ್ಯವಿಲ್ಲ ; ನಾರಾಯಣನೆಂಬುವನು ಪ್ರಭುವೇ ? ಈ ಹುಚ್ಚುತನವನ್ನು ಬಿಡು. ಕುರುಕುಲ ತಿಲಕನಿದ್ದೆಡೆಗೆ ನಡೆ.) ಹೀಗೆ ನುಡಿದು ಪದ್ಮಾಲಯೆಯಾದ ಲಕ್ಷ್ಮಿಯನ್ನು ತಿರುಗಿಸಿ, ಮುಂದಿಟ್ಟು ಕುರುಕುಟುಂಬದ ಜೇಟಿಯನ್ನು ತರುವಂತೆ ತಂದು ವೃಕೋದರನ ಗದಾಘಾತದಿಂದ ಚೂರು ಚೂರಾದ ತೊಡೆಗಳುಳ್ಳ, ಭೀಮಸೇನನ ಹೊಡತಗಳ ಮೂಲಕವಾಗಿ ಸುರಿಯುವ ರಕ್ತದಿಂದ ಆರ್ದ್ರವಾದ ತಿರಸ್ಸುಳ್ಳ ಕೌರವೇಶ್ವರನ ಹತ್ತಿರ ಹೋಗಿ, ಅಶ್ವತ್ಥಾಮನು,

ಚಂ ॥ ನೆಗಳ್ದ ನೆಗಳ್ತೆಗಾವೆಡೆಯೊಳಂ ಪಳಿಯಿಲ್ಲದೆ ಪೂಣ್ದು ಸಂದ ವೈ ।
ರಿಗಳನೆ ಕೊಂದು ವಾರಿಧಿ ಪರೀತ ಮಹೀತಳವಂ ನಿಮಿರ್ಚ್ಚಿ ಜೆ ॥
ಟ್ಟಿಗರನಯೋನಿಸಂಭವರ ನಾಳ್ದರಿವರ್ಗದೊಳಾಂತು ಕಾದೆಯುಂ ।
ಬಗೆ ದೊರೆಕೊಂಡುದಿಲ್ಲಿದು ವಿಧಾತ್ರನ ದೋಷವೋ ನಿನ್ನ ದೋಷವೋ ॥ ೧೦೩ ॥

ಕೈಕೊಂಡ ಕಾರ್ಯವನ್ನು ಅನಿಂದ್ಯರೀತಿಯಿಂದ ನಿರ್ವಹಿಸಿ, ಶತ್ರುಗಳನ್ನು ಕೊಂದು, ಸಮುದ್ರವಸನವುಳ್ಳ ಪೃಥ್ವೀತಲವನ್ನು ವಶಮಾಡಿಕೊಂಡು, ಜೆಟ್ಟಿಗರಾದ ದ್ರೋಣರಿಗೂ ಕೂಡ ಮಣಿಯದ ರಿಪು ಬಲದೊಡನೆ ಎದುರಾಗಿ ಕಾದಿಯೂ ಕೊನೆಗಾಣಲಿಲ್ಲ. ಇದಕ್ಕೆ ನಾನು ದೈವದುರ್ವಿಲಸಿತವೆಂದೆನ್ನಲೋ, ಅಥವಾ ನಿನ್ನ ಪಾಪಕರ್ಮ ಪರಿಪಾಕವೆಂದೆನ್ನಲೋ? ನನ್ನನ್ನು ವಂಚಿಸಿ ಹೋದೆಯಾದುದರಿಂದ ನಿನಗೆ ಇಂಥ ದುರವಸ್ಥೆಯು ಪ್ರಾಪ್ತವಾಯಿತು. ಇನ್ನು ನೀನು ನನಗೆ ಆಜ್ಞೆಯನ್ನು ಕೊಟ್ಟರೆ, ಇದಿ

ರಾದ ಪೃಥಾಸುತ (ಕುಂತೀತನಯರಾದ ಪಾಂಡವ) ರನ್ನು ನಿಶ್ಚಯವಾಗಿ ಕೊಲ್ಲುವೆನೆಂದು ನುಡಿದನು ಎಂಬುದನ್ನು ಕೇಳಿ ಫಣಿಕೇತನನು ನೆತ್ತಿಯಿಂದುಗುವ ನೆತ್ತರ ಧಾರೆಯಿಂದ ಮೆತ್ತಿದ ಕಣ್ಣುಗಳನ್ನು ಒತ್ತಂಬದಿಂ ತೆರೆದು ಅಶ್ವತ್ಥಾಮನ ಮುಖವನ್ನು ನೋಡಿ,

ಚಂ॥ ಎನಗಿನಿತೊಂದವಸ್ಥೆ ವಿಧಿಯೋಗದಿನಾದುದಿದರ್ಕೆ ನೀನಳ ।
ಲ್ದಿನಿಸು ಮನಃಕ್ಷತಂಬಿಡದಿರಾಗದು ಪಾಂಡವರಂ ಗೆಲಲ್ ಪುರಾ ॥
ತನಪುರಷಂ ಮುರಾರಿ ಕೆಲದೊಳ್ ನಿಲೆ ನೀಂ ಕೊಲಲಾಪೊರ್ಡಾಗದೆಂ ।
ಬೆನೆ ತರಿದೊಟ್ಟ ವೈರಿಗಳ ನೆಂನಸುವುಳ್ಳಿನಮೆಯ್ದೆ ತಾ ಗಡಾ ॥ ೧೦೫ ॥

ನನಗೆ ಇನಿತೊಂದವಸ್ಥೆಯು ದುರ್ದೈವದಿಂದ ಪ್ರಾಪ್ತವಾಯಿತು. ಇದಕ್ಕಾಗಿ ನೀನು ಶೋಕಮಾಡಕೂಡದು. ಮನಸ್ಸಿನ ಖೇದವನ್ನು ದೂಡು. ನನ್ನ ದೇಹದಲ್ಲಿ ಪ್ರಾಣವಿರುವಾಗಲೇ ವೈರಿಗಳನ್ನು ತರಿದು ಅವರ ತಲೆಗಳನ್ನು ನನಗೆ ತೋರಿಸೆಂದು ಹೇಳಿದನು. ರುದ್ರಾವತಾರನಾದ ಅಶ್ವತ್ಥಾಮನು ಪಾಂಡವರನಿಕ್ಕಿದ ಸುದ್ದಿಯನ್ನು ತೀವ್ರವಾಗಿಯೇ ತಿಳಿಸುವೆನೆಂದು, ದುರ್ಯೋಧನನಿಗೆ ವಚನಕೊಟ್ಟು, ನಾನು ಬರುವವರೆಗೆ ಅರಸನನ್ನಗಲದೆ ಅರಳಿದ ಕಮಲಪತ್ರಛತ್ರದ ತಣ್ಣೆಳಲನ್ನು ಕುಂದಲೀಯದಿರೆಂದು ಲಕ್ಷ್ಮಿಯನ್ನು ನಿಯಮಿಸಿ, ಅರಸನನ್ನು ಬೀಳ್ಕೊಂಡು ಹೋದನು. ಆಗ

ಚಂ॥ ಮಗನಳಲೊಳ್ ಕರಂ ಮರುಗುತಿಪ್ಪಿನಮೆನ್ನ ತನೂಜನಾಳ್ದ ಸಾ ।
ಮಿಗಮಳಿವಾಗೆ ಶೋಕರಸವಿಮ್ಮಡಿಸಿತ್ತು ಜಳಪ್ರವೇಶಮ ॥
ಲ್ಲಿಗೆ ಪದನೆಂದು ನಿಶ್ಚಯಿಸಿ ವಾರಿಜನಾಥನ ನಾಥನಾಗಿ ತೊ ।
ಟ್ಟಗೆ ಜಗುಳ್ವಂತೆವೋಲ್ ಮುಳುಗಿದಂ ಕಡುಕೆಯ್ದು ಪರಾಂಬು
ರಾಶಿಯೊಳ್ ॥ ೧೦೬ ॥

ಮಗನ (ಕರ್ಣನ) ಬಗ್ಗೆ ಶೋಕವು ಇನ್ನೂ ಶಾಂತವಾಗಿಲ್ಲ; ಇಷ್ಟರಲ್ಲಿಯೇ ನನ್ನ ಮಗನ ಸ್ವಾಮಿಗೆ ಮರಣವುಂಟಾಯಿತು. ಹೀಗೆ ಶೋಕ

ರಸವು ಇಮ್ಮಡಿಯಾಗಿರಲು, ಜಳಪ್ರವೇಶವಮಾಡುವದುಚಿತವೆಂದು ಕೂಡಲೆ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಿದನು.

ಆ ಪ್ರಸ್ತಾವದಲ್ಲಿ ಅಶ್ವತ್ಥಾಮನು ಹಸ್ತಿನಾಪುರಕ್ಕೆ ಹೋಗಿ ಧೃಷ್ಟದ್ಯುಮ್ನ, ಶಿಖಂಡಿ ಮೊದಲಾದವರನ್ನು ನಾಶಮಾಡಿ ಶ್ರುತಸೋಮಕ ಪ್ರಮುಖರಾದ ಪಂಚಪಾಂಡವರನ್ನು ಕೊಂದು ಅವರ ತಲೆಗಳನ್ನು ಕೊಂಡು ಸೂರ್ಯನು ಮೂಡುವದಕ್ಕೆ ಮೊದಲು ದುರ್ಯೋಧನನನ್ನು ಕಂಡು 'ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳಂ' ಎಂದು ಮುಂದಿಕ್ಕಲು, ದುರ್ಯೋಧನನು ಅವುಗಳನ್ನು ನೋಡಿ,

ಕಂ ॥ ಬಾಲಕಮಲಂಗಳಂ ಕಮ ।
ಳಾಲಯದಿಂ ತಿರಿದು ತರ್ಪವೋಲ್ ತಂದ್ಪೆ ನೀಂ ॥
ಬಾಲಕರ ತಲೆಗಳಕ್ಕಟ ।
ಬಾಲಕವಧದೋಷಮೆಂತು ನೀಂ ನೀಗಿದಪೈ ॥ ೧೦೭ ॥

ಸರೋವರದಿಂದ ಬಾಲಕಮಲಗಳನ್ನು ತಿರಿದು ತರುವಂತೆ, ನೀನು ಬಾಲಕರ ತಲೆಗಳನ್ನು ತಂದಿರುವೆ. ಅಕಟ! ನಿನಗೆ ಬಾಲಕ ವಧದೋಷವು ತಪ್ಪದೆಂದು ದುಃಖದಿಂದ ಮರುಗಿದನು. (ದುರ್ಯೋಧನನಲ್ಲಿ ನಮ್ಮ ಕವಿಗೆ ಆದರವು ಹೆಚ್ಚು. ಅವನ ಗುಣಗಳನ್ನು ಆಗಾಗ್ಗೆ ಸ್ತುತಿಸುತ್ತಲೇ ಇರುವನು) ಇದಕ್ಕೆ ಕರ್ತವ್ಯಮಾವುದೆಂದು ಅಶ್ವತ್ಥಾಮನು ಕೇಳಲು, ಹಿಮವತ್ ಪರ್ವತದಲ್ಲಿ ತಪಶ್ಚರಣ ಪರಾಯಣರಾಗಲು ದುರ್ಯೋಧನು ಉಪದೇಶಿಸಿ ಪ್ರಾಣವನ್ನುಳಿದನು. ಅಶ್ವತ್ಥಾಮ ಕೃಪಾಚಾರ್ಯರು ಸಿಗ್ಗಾಗಿ ಪರ್ವತಕ್ಕೆ ನಡೆಗೊಂಡರು. ಬಿಳಿಯ ತಾವರೆಯೆಸಳೊಳ್ ಮಾಡಿದ ಬೆಳ್ಗೊಡೆಯು ರಮ್ಯವಾಗಿರಲು, ಪೊಳೆವ ಜೆಂಬೊನ್ನ ಕಾವಿನ ಚಾಮರವು ಎಡಗೆಯ್ಯಲ್ಲಿರಲು, ಕೆಲವು ರಾಜ್ಯ ಚಿಹ್ನಗಳಿಂದೊಡಗೂಡಿ ರಾಜ್ಯಲಕ್ಷ್ಮಿಯು ಸಂತೋಷನಿರ್ಭರಳಾಗಿ ಸಹಜ ಮನೋಜನನ್ನು (ವಿಕ್ರಮಾರ್ಜುನನ್ನು) ಸೇವಿಸಿದಳು.

# ಚತುರ್ದಶಾಶ್ವಾಸ

ಕಂ ॥ ಶ್ರೀರಾಮಾಲಿಂಗಿತ ವಿಪು ।
ಲೋರಸ್ಕಂ ಭಾಸ್ಕರಪ್ರತಾಪಂ ನಿಜದೋ ॥
ರ್ಮೇರು ಮಥಿತಾರಿ ಬಳಕೂ ।
ಪಾರಂ ಸಂಹಾರಿತಾರಿ ಶೌರ್ಯಂ ಹರಿಗಂ ॥ ೧ ॥

ತಾನು ಇರಿದು ಗೆಲ್ದ ಕೊಳಗುಳವನ್ನು ನೋಡಲು, ಶ್ರೀ ವಿಕ್ರಮಾರ್ಜುನನು ಚಕ್ರಪಾಣಿಯನ್ನೂ ತನ್ನ ಸಹೋದರರನ್ನೂ ಕೂಡಿಕೊಂಡು ಸಂಗ್ರಾಮಭೂಮಿಗೆ ಬಂದು, ಅಲ್ಲಿ ತನ್ನಿಂದ ಅಂತಕನ ಆನನಮನೆಯ್ದಿದ ಪ್ರಚಂಡ ಮಂಡಳಿಕರನ್ನೂ, ಸಾಮಂತರನ್ನೂ ಕರಿತುರಗಗಳನ್ನೂ ಕಾಲಾಳ್ಗಳನ್ನೂ ಕಂಡು ಮುರಾರಿಯ ಮುಖವನ್ನು (ಅಭಿಮಾನದಿಂದ) ನೋಡಲು, ಅವನು ಧರ್ಮರಾಜನಿಗೆ ಹೀಗೆಂದನು.

ಉ ॥ ಶಾತ ಶರಾಗ್ನಿ ಭಗ್ನ ಭಟಕೋಟಿವಿಭೂಷಣಮುಗ್ರವೈರಿ ಸಂ ।
ಘಾತಕರೀಂದ್ರ ರುಂಧ್ರ ಕಟಿಕೂಟ ಪರಿಚ್ಯುತಭೃಂಗ ಮಾಳಿಕಾ ॥
ಪೀತಮದಾಂಬುಕಂ ಪ್ರಕೃತಿರಕ್ತಜಳಾಸವ ಮತ್ತಯೋಗಿನೀ ।
ವ್ರಾತ ಪರೀತ ಭೂತಸದನಂ ಕದನಂ ಕದನತ್ರಿನೇತ್ರನಾ ॥ ೩ ॥

ಚಂ ॥ ಸ್ಫುರಿತ ವರೂಥ ಚಕ್ರಹತಿಯಿಂ ಧರಿಣೀತಳಮತ್ತಮಿತ್ತಮ ।
ರ್ದ್ದರಿಯೆ ವಿಯತ್ತಳಂ ಬಗೆದು ನೋಳ್ಪೊಡೆ ನಾಡೆ ಪತತ್ ಪತತ್ರಿಜ ॥
ರ್ಜ್ಜರಿತಮೆ ದಿಕ್ತಟಂ ರಿಪುನರಾಧಿಪ ರಕ್ತಮಯ ಪ್ರವಾಹ ಪಿಂ ।
ಜರಿತಮೆ ಬೀರಮಂ ಪೊಗಳ್ವನೇವೊಗಳ್ವಂ ಕದನತ್ರಿನೇತ್ರನಾ ॥ ೪ ॥

ನಿಶಿತಾಸ್ತ್ರಗಳ ಅಗ್ನಿಜ್ವಾಲೆಯಿಂದ ನಾಶಹೊಂದಿದ ವೀರರ ಸಮುದಾಯದಿಂದ ದಾರುಣವಾದುದೂ, ನೆಲದಮೇಲೆ ಉರುಳಿದ ವಿಶಾಲವಾದ ಗಂಡಸ್ಥಳಗಳುಳ್ಳ ಆನೆಗಳ ತಂಡಗಳಿಂದ ವ್ಯಾಪ್ತವಾದುದೂ, ರಕ್ತ ಜಳಪಾನದಿಂದ ಮತ್ತವಾದ ಹೆಣ್ಣು ದೆವ್ವಗಳಿಂದ ತುಂಬಿದುದೂ, ಭೂತಗಳಿಗೆ ಇರಲು ಮನೆಯಾದುದೂ ಆಗಿ ಕದನತ್ರಿನೇತ್ರನ (ಯುದ್ಧದಲ್ಲಿ ಭೈರವ ಸ್ವರೂಪನಾದ

ವಿಕ್ರಮಾರ್ಜುನನ) ಕದನವು ಶೋಭಿಸುತ್ತಿರುವದು. ಎಲ್ಲೆಲ್ಲಿ ನೋಡಿದರೂ ಧರಣೀತಲವು ರಥಚಕ್ರಗಳ ಹೊಡತಗಳಿಂದ ನೊಂದುಕೊಂಡಿರುವುದು. ಗಗನ ತಳವು ಬಾಣಗಳಿಂದ ಜರ್ಜರಿತವಾಗಿರುವುದು. ಸಮಸ್ತ ದಿಗ್ಭಾಗಗಳೆಲ್ಲ ಶತ್ರುರಾಜರ ರಕ್ತದ ಪ್ರವಾಹಗಳಿಂದ ಕೆಂಪಾಗಿರುವುವು. ಕದನಕ್ಷೇತ್ರನ ಅನ್ಯಾದೃಶ ಶೌರ್ಯವನ್ನು ಹೊಗಳಲು ಯಾರುತಾನೇ ಸಮರ್ಥರು? ಇಷ್ಟರಲ್ಲಿ ಧೃತರಾಷ್ಟ್ರ ಗಾಂಧಾರಿಯರು ಬರಲು, ದುರ್ಯೋಧನನ ಪೆಂಡಿರಪ್ಪ ಭಾನುಮತಿ, ಚಂದ್ರಮತಿ, ಮೊದಲಾಗಿ ಸಮಸ್ತಾಂತಃಪುರದ ಸ್ತ್ರೀಯರೂ ದುಶ್ಶಾಸನ ಲಕ್ಷ್ಮಣ ಕರ್ಣ ಮೊದಲಾದವರ ಹೆಂಡಂದಿರೂ ತಮ್ಮ ಗಂಡಂದಿರನ್ನು ಕೊಳಗುಳದಲ್ಲರಸಿ ಕಾಣದೆ ಬಾಯಳಿದು ಬಸವಳಿದು ಯೂಥಪತಿಯು ಸಾಯಲು ವನಕರಿಕರೇಣುಗಳಂತೆಯೂ ಕಲ್ಪವೃಕ್ಷವು ಕಿತ್ತಿ ಬೀಳಲು ಆಡರ್ಪಿಲ್ಲದೆ ಬಂಬಲ ಬಾಡಿದ ವನಲತೆಗಳಂತೆಯೂ ನಿರಾಶ್ರಿತರಾಗಿ,

ಚಂ॥ ಇರಿವ ಪಿಣಿಲ್ ತೆರಳ್ದೊರೆವ ಕಣ್ಬನಿ ಮಾಣದೆವೋದೆ ಶೋಕದ।
ಚ್ಚಿರಿದವೊಲಿರ್ದ್ದ ಬಾಸುಳಿನೊಳಳ್ದು ಕನಲ್ದು ಬಳಲ್ದು ಜೋಲ ಮೆ ॥
ಯ್ಮರುಗುವ ಬೇಗದೊಳ್ ಮೊಗಮಣಂ ದೆಸೆಗಾಣದ ನೋಟವಾರುಮಂ
ಮರುಗಿಸೆ ಬಂದುದಂದು ಕರುಣಂ ಬರೆ ವೈರಿನೃಪಾಂಗನಾಜನಂ ॥ ೫ ॥

ಹೆಣಿಲು ನೇತಾಡುತ್ತಿರಲು, ಕಣ್ಣಿನಿಂದ ಜಲಧಾರೆಯು ಸುರಿಯುತ್ತಿರಲು, ಮೆಯ್ಯು ನಡುಗುತ್ತಿರಲು, ಕನಲ್ದು ಬಳಲ್ದು ಶೋಕಾವೇಗದಲ್ಲಿ ದಿಕ್ಕುಗಾಣದೆ ವಜ್ರಹೃದಯವನ್ನು ಕರಗಿಸುತ್ತಲೂ ಕಲ್ಲಿನಲ್ಲಿ ಕರುಣ ರಸವನ್ನುಂಟುಮಾಡುತ್ತಲೂ 'ಕರುಣಂ (ಮೂರ್ತ ಸ್ವರೂಪವನ್ನು ತಾಳಿ) ಬರೆ' ಬಂದರು. ಆಗ ಧರ್ಮಪುತ್ರನು ಧೃತರಾಷ್ಟ್ರ ಗಾಂಧಾರಿಯರಿಗೆ ಪೊಡಮಟ್ಟು ಮಗನ ಶೋಕವನ್ನು ಮರೆದು ತನ್ನನ್ನು ಮಗನೆಂದು ಭಾವಿಸಲು ಅವರಿಗೆ ಬೇಡಿಕೊಂಡನು. ಆಗ ಧೃತರಾಷ್ಟ್ರನು ಪುತ್ರ ಮರಣ ದಿಂದ ಮೂಢನಾದುದರಿಂದ ಹೆಚ್ಚಾಗಿ ನುಡಿಯದೆ 'ಈ ವನಿತೆಯರಿಗೆ

ಅವರವರ ಪುರುಷರನ್ನು ಸಂಸ್ಕಾರಿಸಲು ಕುಡವೇಳ್ಕೆಂದು ಹೇಳಿದನು. ಧರ್ಮರಾಜನು 'ಅದಾವುದು ದೋಷಂ ಅವರ್ಗೆಲ್ಲಂ ಸಂಸ್ಕಾರ ವಿಧಿಯಂ ನಾನೆ ಪಕ್ಕದೊಳಿದ್ದು ಮಾಡಿಸುವೆನೆಂ'ದೆನ್ನುತ್ತಿರಲು ಕುಂತಿಯು ಕರ್ಣನ ಮೃತ ಶರೀರವನ್ನು ತಳ್ಕೈಸಿಕೊಂಡು, ಅವರಯ್ವರನ್ನು ಅಲ್ಲಿಗೆ ಬರಿಸಿ, 'ನಿಮ್ಮಣ್ಣನಿವನು ನಿಮ್ಮ ಮೋಹದಿಂದ ಇವನನ್ನು ಕೊಂದೆ'ನೆಂದು ಶೋಕ ವನ್ನು ಮಾಡಿದಳು. ಆ ಮಾತನ್ನು ಕೇಳಿ ಸಹೋದರಶೋಕವನ್ನು ಸೈರಿಸ ಲಾರದೆ,

ಚಂ ॥ ಅರಿಪಿದರಾರುಮಿಲ್ಲಿ ಮಗೆ ನೀನೆಮಗಣ್ಣನಯೆಂದು ಮುನ್ನಮಾ ।
ಮರಿದೊಡೆ ಪಟ್ಟಮುಂ ನೆಲನುಮುಂ ನಿನಗಿತ್ತು ಕುರುಪ್ರಧಾನನೊ ॥
ಳ್ಕರುಪನೆ ನಿಚ್ಚಟಂ ಬಿಸುಟು ನಿನ್ನಯ ಪೇಳ್ದುದು ಗೆಯ್ದು ಪಾಳಿ ಕ ।
ಟ್ಟಿರೆದಿರೆ ಬಾಯ ತಂಬುಲದೊಳಂ ಮಡಗೂಳೊಳಮುಂಗವಲ್ಲಭಾ ॥ ೧೦ ॥

'ನೀನು ನಮಗೆ ಅಣ್ಣನೆಂದು ಯಾರೂ ತಿಳುಹಲಿಲ್ಲ; ಮೊದಲು ಈ ಮಾತನ್ನು ನಾವು ಅರಿತಿದ್ದೆವಾದರೆ, ಸಿಂಹಾಸನವನ್ನೂ, ಪೃಥ್ವಿಯನ್ನೂ ನಿನ ಗೊಪ್ಪಿಸಿ, ಕುರುರಾಜನಲ್ಲಿಯ ವೈರಭಾವವನ್ನು ಬಿಸುಟು ನೀನು ಹೇಳಿದು ದನ್ನು ಮಾಡುತ್ತಿದ್ದೆವು. ಅಂಗರಾಜನೇ, ನಿನ್ನನ್ನು ತಿಳಿಯದೆ ಕೊಂದೆವು,' ಎಂದು ಶೋಕಾಕ್ರಾಂತರಾಗಲು ನಾರಾಯಣನು ಸಂತೈಸಿ 'ಕೊಂದರ್ ಕೊಲೆ ಸಾವರೆಂಬುದು ಜಗದ್ವ್ಯಾಪಾರಮೀಶ್ವರನಿಚ್ಛೆಯಿಂದೆ ನೆಗಳ್ಗು ಮೆಂದು ದುಃಖೋಪಶಮನಂ' ಮಾಡಿದನು. ಆಗ ಅವರೆಲ್ಲರೂ ಸಮಾ ಹಿತ ಚಿತ್ತರಾಗಿ ಕುರುಕ್ಷೇತ್ರದಲ್ಲಿ ಸತ್ತರಸುಮಕ್ಕಳೆಲ್ಲರುಮನೊಂ ದಾಗಿ ತಂದು ಮಂತ್ರ ವಿಧಿಯಿಂದ ಹರಿಚಂದನ ಕರ್ಪೂರಾದಿಗಳಿಂದ ಸಂಸ್ಕ ರಿಸಿದರು. ಧೃತರಾಷ್ಟ್ರ ಗಾಂಧಾರಿಯರೂ, ಕರ್ಣನ ಮರಣಶೋಕಸಂತ ಪ್ತೆಯಾದ ಕುಂತಿಯೂ ಮುನಿವನವನಾಶ್ರಯಿಸಿದರು. ಇತ್ತ ಧರ್ಮ ನಂದನನು ದೇವಕೀನಂದನನಿಗೆ 'ಎನಗೆ ನಿರ್ದಾಯಾದ್ಯಮೀ ಪೆಂಪೆ ಸಾಲ್ಗೆ ನಗಿಂ ರಾಜ್ಯಮೆ ಬಾಳ್ತೆಯಲ್ತು ಅರಿಗಂಗೆ ಉತ್ಸಾಹದಿಂ ಪಟ್ಟಬಂಧ

ನವಂ ಮಾಡುವಾ' ಎಂದು ನುಡಿಯಲು ಅವನು ಅದಕ್ಕೊಪ್ಪಿ ಶುಭಮುಹೂರ್ತದಲ್ಲಿ ಅರಿಕೇಸರಿಯನ್ನು ಮುಂದಿಟ್ಟು ಹಸ್ತಿನಪುರದ ಉಪವನಕ್ಕೆ ಬಂಧರು. ಆಗ,

ಚಂ॥ ಮೃದುಮಧುರಸ್ವನಂ ನೆಗಳೆ ಬಂದೆಳಮಾವಿನೊಳಿರ್ದ್ದ ಕೂಡೆ ಪಾ।
ಡಿದುದು ಮದಾಳಿಮಾಲೆ ಪುಗಲಿನ್ನದೆ ದಲ್ಪುಗಿಮೆಂದು ಮೆಲ್ಪುಗುಂ॥
ದದ ದನಿಯಿಂ ತಳಿರ್ತಸುಗೆಯೊಳ್ ನೆಲಸಿರ್ದ್ದ ಪಿಕಾಳಿ ಮೆಲ್ಲನೂ।
ಳ್ದುದು ಮನವಾರೆ ತೀಡಿದುದು ತೆಂಕಣ ತಂಬೆಲರಪ್ಪಿಕೊಳ್ವವೋಲ್ ॥ ೧೨ ॥

ಪಸರಿಸಿ ಬಂದ ಮಾಮರನೆ ಬೆಳ್ಗೊಡೆ ರಾಗದ ಪುಂಜದಂನವ।
ಪ್ರಸುಗೆಯು ನೀಳ್ದ ಕೆಂದಳಿರೆ ಪಾಳಿ ಮಹಾಧ್ವಜಮೆತ್ತಮಿಂಪನಾ॥
ಳ್ದೆಸೆವಳಿಗೀತಿ ತಾನೆ ಜಯಗೀತಿಗಳಾಗಿರೆ ವಿಕ್ರಮಾರ್ಜ್ಜುನಂ।
ಗೊಸೆದಿದಿರ್ವರ್ಪ್ಪವೋಲ್ ಬನವದೊಪ್ಪಿದುದಿಂತು ಬಸಂತರಾಜನಾ ॥ ೧೩ ॥

ವಸಂತಮಾಸವು ಪ್ರಾಪ್ತವಾಯಿತು. ಮೃದುಮಧುರಸ್ವರದಿಂದ ಮದಾಳಿಗಳು ಮಂಜುಲಗೀತೆಗಳನ್ನು ಪಾಡಿದವು. ಪಿಕಾಳಿಗಳು ಚಿಗಿತು ನವಪಲ್ಲವಗಳಿಂದ ರಂಜಿಸುವ ಅಶೋಕದಲ್ಲಿದ್ದು ಪಂಚಮದಿಂಚರವನ್ನು ನುಡಿದವು. ತೆಂಕಣದ ತಂಬೆಲರು ವಿಕ್ರಮಾರ್ಜುನನನ್ನು ಅಪ್ಪಿಕೊಳ್ಳುವಂತೆ ಮೆಲ್ಲನೆ ತೀಡಿತು. ಬಸಂತರಾಜನು ರಾಜ್ಯಚಿಹ್ನಗಳನೊಡಗೊಂಡು ವಿಕ್ರಮಾರ್ಜುನನಿಗೆ ಇದಿರುಬಂದನು. ಈ ಪ್ರಕಾರ ಬಾಹ್ಯಸೃಷ್ಟಿಯಲ್ಲಿಯೂ, ಅಂತರಂಗದ ಪ್ರಪಂಚದಲ್ಲಿಯೂ ಉಲ್ಲಾಸವು ನೆಲಸಿರಲು, ಅವರು ಪುರೋಪವನದಲ್ಲಿ ಕೆಲವು ಕಾಲವನ್ನು ಕಳೆದು ಪಂಚರತ್ನಮಯವಾದ ಅಲಂಕಾರಗಳಿಂದ ರುಚಿರವಾದ ವಿಜಯ ಗಜವನ್ನೇರಿದ ವಿಜಯನನ್ನು ಮುಂದಿಟ್ಟು ವೈಭವದಿಂದ ತಮ್ಮ ರಾಜಧಾನಿಗೆ ಹೋಗಲು, ಪುರದಲ್ಲಿ ಕಾಲಾಗರು ಮೊದಲಾದ ಪರಿಮಳ ದ್ರವ್ಯಗಳ ಸುಗಂಧವು ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು.

ಮಲ್ಲಿಕಾಮಾಲೆ॥ ಓಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸಾ।
ಧಾಳಿಯೊಳ್ ಗುಡಿಯಾಯ್ತು ಚೀನದ ಸುಯ್ಕಕಾಣದ ಪಟ್ಟಿಹ॥

ಮ್ಯಾಳಿದಪ್ಪದೆ ರಯ್ಯಮಾಯ್ತು ಸೆವಾಟಪಾಟದ ಗೀತಿ ಕ ।
ಣ್ಗೊಳಿವಟ್ಟುದದೊಂದು ಚೆಲ್ವು ದಲಾಯ್ತು ತತ್ಪುರಮಧ್ಯದೊಳ್
॥ ೧೫ ॥

ಮಾಳಿನಿ ॥ ಪ್ರವರ ತರ ಪುರಂಧ್ರೀ ನೂಪೂರಾರಾವಮೆತ್ತಂ ।
ಕಿವಿಗೆವರೆ ವಿಳಾಸಂ ಕಣ್ಗೆ ಶೇಷಾಕ್ಷತೋಪ ॥
ದ್ರವಮೆ ತನಗದತ್ತಂಬನ್ನರೆಂಬನ್ನೆಗಂ ಪಾಂ ।
ಡವರೆ ಪುಗೆ ಪೊಳಲ್ಗಂದೊಟ್ಟಿ ಬೆಟ್ಟಾಯ್ತು ರಾಗಂ ॥ ೧೬ ॥

ಬೀದಿ ಬೀದಿಗಳಲ್ಲಿ ತೋರಣದ ಪಂಕ್ತಿಗಳೆಸೆಯುತಲಿದ್ದವು; ಕಮನೀಯ ವಾದ ಹಾರಗಳು ಎಲ್ಲೆಡೆಯಲ್ಲಿಯೂ ಕಂಗೊಳಿಸುತಲಿದ್ದವು; ಚೀನಪಟ ಗಳು ವಾತಾವರಣದಲ್ಲಿ ಆನಂದಲಹರಿಯನ್ನುಂಟುಮಾಡುತಲಿದ್ದವು; ಸೌಧಾ ಗ್ರಗಳಲ್ಲಿ ಗುಡಿಗಳು ಮನೋಹರವಾಗಿದ್ದುವು, ಆಟಪಾಟಗಳು ಅವಿಚ್ಛಿನ್ನ ವಾಗಿ ನಡೆದಿದ್ದುವು; ಮಂಗಲ ಗೀತೆಗಳ ಮಂಜುಲಧ್ವನಿಯು ಆಕಾಶದಲ್ಲಿ ಕೋಮಲವಾಗಿ ಸುಳಿಯುತಲಿದ್ದಿತು. ಪುರದಲ್ಲಿಯ ಪ್ರೌಢಸ್ತ್ರೀಯರ ನಲ್ನೀವುರಗಳ ನುಣ್ದನಿಯು ಎಲ್ಲೆಲ್ಲಿಯೂ ಕಿವಿಗೆ ಬೀಳುತಲಿದ್ದಿತು. ಹೀಗೆ ಸುತ್ತಲೂ ಪ್ರೇಮವು ಒಟ್ಟಾಯ್ತೆಂಬಂತೆ ತೋರುತ್ತಿರಲು ಪಾಂಡವರು ಪುರ ವನ್ನು ಸೇರಿದರು. ಪುರಜನರು ಆಶೀರ್ವಾದ ಪೂರ್ವಕವಾಗಿ ಶೇಷಾಕ್ಷತೆ ಗಳನ್ನು ಸೂಸುತ್ತಿರಲು, ಪುರಾಂಗನೆಯ ಅರಳಿದ ಮುಖ ಕಮಲದಂತೊಪ್ಪುವ ರಾಜ ಮಂದಿರವನ್ನು ಆ ಅಯ್ವರು ಸೇರಿದರು. ಧರ್ಮನಂದನನು ವಿಕ್ರ ಮಾರ್ಜುನನಿಗೆ,

ಉ ॥ ಪ್ರಾಯದ ಪೆಂಪೆ ಪೆಂಪೆಮಗೆ ಮೀರಿದರಂ ತವೆ ಕೊಂದ ಪೆಂಪು ಕ ।
ಟ್ಟಾಯದ ಪೆಂಪು ಶಕ್ರನೊಡನೇರಿದ ಪೆಂಪಿವು ಪೆಂಪುವೆತ್ತು ನಿ ॥
ಟ್ಟಾಯುಗಳಾಗಿ ನಿನ್ನೊಳಮುದ್ದಿರ್ದುವು ನೀಂ ತಲೆವೀಸದುರ್ವರಾ ।
ಶ್ರೀಯ ನಿದಾಗದೆನ್ನದೊಳಕೊಳ್ ಪರಮೋತ್ಸವದಿಂ ಗುಣಾರ್ಣವಾ ॥ ೧೭ ॥

ಪ್ರಾಯದ ಪೆಂಪು. ಶೌರ್ಯ ಶಾಲಿಗಳಾದಶತ್ರುಗಳನ್ನು ಸಂಹರಿಸಿದು ದೊಂದು ಪೆಂಪು (ಉತ್ಕರ್ಷ); ದೃಢ ನಿಶ್ಚಯದ ಪೆಂಪೊಂದು; ಇಂದ್ರನ

ಅರ್ಧಾಸನವನ್ನು ಸೆಳೆದ ಪೆಂಪೊಂದು ; ಹೀಗೆಉತ್ಕರ್ಷ ಪರಂಪರೆಯು ನಿನ್ನಲ್ಲಿ ನೆಲಸಿರಲು, ನೀನು ತಲೆವೀಸದೆ ' ಇದಾಗದೆ 'ನ್ನದೆ ಭುವನರಾಜ್ಯ ಲಕ್ಷ್ಮಿಯನ್ನು ಉತ್ಸವದಿಂದ, ಗುಣಾರ್ಣವನೇ, ಸ್ವೀಕರಿಸೆಂದು ಹೇಳಿದನು.

ಧರ್ಮಪುತ್ರ, ದೇವಕೀನಂದನ, ಮರುತ್ಪುತ್ರ ಇವರೆಲ್ಲರೂ ಒತ್ತಾಯ ಮಾಡಲು ವಿಕ್ರಮಾರ್ಜುನನು ತನ್ನ ಪಟ್ಟಬಂಧನೋತ್ಸವಕ್ಕೆ ಒಡಂಬಟ್ಟನು. ಆಗ ಪಂಚರತ್ನಮಯವಾದ ಸಭಾ ಮಂಟಪವನ್ನು ತರಿಸಿ, ವಸಿಷ್ಠ ಕಶ್ಯಪ ಮೊದಲಾದ ಮುನಿಪತಿಗಳಂ ಬರಿಸಿ ಏಳುಸಮುದ್ರ ಚತುರ್ದಶನದಿ ಇವುಗಳ ನೀರನ್ನು ತಳತಳ ತೊಳಗುವ ಬಂಗಾರದ ಕೊಡಗಳಲ್ಲಿ ತೀವಿತಂದು. ಧವಳಛತ್ರ ಚಾಮರ ಸಿಂಹಾಸನ ಪಟ್ಟವರ್ಧನ ಸಕಲ ಧಾನ್ಯಾದಿ ರಾಜ್ಯಚಿಹ್ನಗಳನ್ನು ವಿವಿಧ ವಿಧಾನಗಳಿಂದಧಿವಾಸಿಸಿ, ಗಂಗಾಜಳಪವಿತ್ರೀಕೃತ ಗಾತ್ರನೂ, ದುಕೂಲಧಾರಿಯೂ ಆದ ವಿಕ್ರಮಾರ್ಜುನನನ್ನು ತಂದು ಮಂಗಳ ವಾದ್ಯಗಳು ಮೊಳಗುತ್ತಿರಲು, ಮಂಗಳ ಗೀತೆಗಳು ಎಸೆಯುತ್ತಿರಲು, ಪ್ರಶಸ್ತ ಶುಭ ಮುಹೂರ್ತದಲ್ಲಿ ಅಷ್ಟೋತ್ತರ ಶತ ಪೂರ್ಣ ಕುಂಭಂಗಳಂ ಚತುರ್ವೇದ ಪಾರಗರಾದ ಬ್ರಾಹ್ಮಣರು ಎತ್ತಿಕೊಂಡು ಮಂತ್ರಗಳಿಂದ ಮೀಯಿಸಿ,

ಮ॥ ಸ್ರ॥ ವನಧಿ ಪ್ರಧ್ವಾನದಿಂ ಮಂಗಳ ಪಟಹರವಂ ಪೆರ್ಚೆ ಮಾಂಗಲ್ಯಗೇಯ ।
ಧ್ವನಿಯಿಂದಾಶಾಂತರಂ ಘೂರ್ಣಿಸಿ ಸೊಗಯಿಸೆ ಕೆಯ್ಗೆಯ್ದು ಸಾಮಂತ ಸೀಮಂ ॥
ತನಿಯರ್ ಮುಂಡಾಡೆ ಭೋರೆಂದೆಸೆಯೆ ಜಯಜಯಧ್ವಾನಮೋರಂತೆ ವಾರಾಂ ।
ಗನೆಯರ್ವಂದಾಡೆ ಸಂದೀ ವಿಭವದೊಳರಿಗಂಗಾಯ್ತು ರಾಜ್ಯಾಭಿಷೇಕಂ ॥ ೧೮ ॥

ಸಮುದ್ರ ಗಂಭೀರವಾದ ಮಂಗಳ ವಾದ್ಯರವವು ಎಲ್ಲೆಲ್ಲಿಯೂ ವ್ಯಾಪಿಸಲು, ಮಾಂಗಲ್ಯ ಗೀತೆಗಳ ಧ್ವನಿಯಿಂದ ದಿಕ್ಕಾಮಿನಿಯರು ಸಂತಸಪಟ್ಟು

ಘೋಷಿಸುತ್ತಿರಲು, ಸಾಮಂತ ಸೀಮಂತಿನಿಯರು ಮಂಗಳಹಾಡಲು, ಜಯ ಜಯನಿನಾದವು ಭೋರೆಂದೆಸೆಯುತ್ತಿರಲು, ವಾರಾಂಗನೆಯರು ನರ್ತನವನೆಸಗುತ್ತಿರಲು, ವೈಭವಾತಿಶಯದಿಂದ ಅರಿಗನಿಗೆ (ಅರ್ಜುನನಿಗೆ) ಪಟ್ಟಾಭಿಷೇಕವಾಯಿತು. ರಾಜ್ಯಾಭಿಷೇಕಾನಂತರದಲ್ಲಿ ಧರ್ಮನಂದನನೂ ವಾಯುನಂದನನೂ ದೇವಕೀನಂದನನೂ ಅಶ್ವಿನೀನಂದನರೂ ಅನೇಕ ಮಂಗಳಾಭರಣಾಳಂಕೃತರಾಗಿ ಅರಿಕೇಸರಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಪಂಚರತ್ನ ಶಿಖಾವಿರಾಜಮಾನಮಪ್ಪ ಪಟ್ಟಮನೆತ್ತಿ ಸುಭದ್ರೆಗೆ ಮಹಾದೇವೀ ಪಟ್ಟವನ್ನು ಕಟ್ಟಿದರು.

ಚಂ ॥ ನೆಗಳ್ದುದು ದೇವದುಂದುಭಿರವಂ ಸುರನಂದನದಿಂ ಪೊದಳ್ದ ಬ ।
ಲ್ಮುಗುಳ್ಗಳ ತಂದಲಂದು ಕವಿತಂದುದಂ ತನಿಸೋಂಕು ಸೋಂಕಿ ಮೆ ॥
ಲ್ಲಗೆ ಮಲಯಾನಿಳಂ ಸುಳಿದೊಡಂದು ಜಗಂ ಪೊಸತಾದುದೆಂದೊಡೇ ।
ವೊಗಳ್ವುದೊ ಪಟ್ಟಬಂಧನಮಹೋತ್ಸವಮಂ ಜಗದೇಕಮಲ್ಲನಾ ॥ ೧೯ ॥

ಉ ॥ ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಳಿಯೊಳೊಂದಿ ಸಾಂದಿನೊ ।
ಳ್ಕತ್ತುರಿಯೊಂದು ಕೊಳ್ಗಿಸರೊಳೋಕುಳಿ ಚಂದನಗಂಧವಾರಿಯೊ ॥
ಳ್ಸುತ್ತಲುಮಳ್ಕರಂ ಪಡೆವ ಗೇಯದ ಪೆಂಪಿನಲಂಪನಾಗ್ಗಮಾ ।
ತ್ತಿತ್ತುದು ಪಟ್ಟಬಂಧನ ಮಹೋತ್ಸವದೊಳ್ ಪಡೆಮೆಚ್ಚೆಗಂಡನಾ ॥ ೨೦ ॥

ದೇವದುಂದುಭಿಗಳು ಮೊಳಗಿದವು; ನಂದನವನದ ಕುಸುಮ ಮರಂದವನ್ನು ಮಲಯಾನಿಳನು ಮೆಲ್ಲಗೆ ಎಲ್ಲೆಡೆಯಲ್ಲಿಯೂ ಪಸರಿಸಿದನು. ಅಂದು ಜಗತ್ತು ಪೊಸತಾದುದೆಂಬಂತೆ ತೋರಿತು. ಜಗದೇಕಮಲ್ಲನ ಪಟ್ಟಬಂಧನ ಮಹೋತ್ಸವವು 'ಅಭೂತಪೂರ್ವ' ವಾದುದಾಯಿತು.

ಆ ಮೇಲೆ ತ್ರಿಭುವನಾಭರಣನೆಂಬ ಆನೆಗೂ ತ್ರಿಭುವನ ತಿಲಕವೆಂಬ ಕುದುರೆಗೂ ಪಟ್ಟ ಗಟ್ಟಿದರು. ಸುಭದ್ರಾದೇವಿಯೂ, ವಿಕ್ರಮಾರ್ಜುನ ನೃಪನೂ ತಕ್ಕಡಿಯಲ್ಲಿ ಕುಳಿತು ತೂಗಿಕೊಂಡು ಬಂಗಾರವನ್ನು ದಾನ ಮಾಡಿದರು. ಆಗ ಮಂಗಪಾಠಕರಿರ್ವರೊಂದೆ ಕೊರಳಿಂ ಮಂಗಳ ವೃತ್ತಂಗಳನೋದಿದರು.

ಶಾ ॥ ರಂಗತ್ತಾರತರಂಗಭಂಗುರ–ಲಸದ್–ಗಂಗಾ–ಜಳಂನರ್ಮದಾ ।
ಸಂಗ ಶ್ವೇತವನಂ ಪ್ರಸಿದ್ಧ ವರದಾ ಪುಣ್ಯಾಂಬು ಗೋದಾವರೀ ॥
ಸಂಗತ್ಯಂಚಿತ ವಾರಿಸಾರ ಯಮುನಾ ನೀಳೋರ್ವಿ ನೀರಂಭುಜೋ ।
ತ್ತುಂಗಗೀಗರಿಗಂಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ॥ ೩೧ ॥

ಮ ॥ ನಯನಾನಂದ ಮೃಗಾಂಕ ಬಿಂಬ ಮುದಯಂಗೆಯ್ವರ್ಕಬಿಂಬಂ ಮನಃ ।
ಪ್ರಿಯಲಕ್ಷ್ಮೀವದನೇಂದು ಬಿಂಬಮಖಿಲ ಕ್ಷ್ಮಾದ್ವೀಪಮಾಶಾ ಪ್ರಮೋ ।
ದ ಯಶೋ ಬಿಂಬಮುದಗ್ರ ದಿಕ್ಕರಿ ಕರಾಭೋದ್ಬಾಹು........।
ಪ್ರಿಯಗಳ್ಯಂ ಗೊಸೆದೀಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ॥ ೩೫ ॥

ಎಂದು ಹೊಗಳಿದ ನಂತರ ವ್ಯಾಸಕಶ್ಯಪ ಮೊದಲಾದ ಮುನಿಗಳು ಬಂದು ತಮ್ಮ ಕಮಂಡಲು ಜಲದಲ್ಲಿ ಬೆರಸಿದ ಧವಳಾಕ್ಷತೆಗಳನ್ನು ವಿಕ್ರಮಾರ್ಜುನನ ಮೇಲೆ ಚೆಲ್ಲಿ ಹರಸಿ ತಮ್ಮ ನಿವಾಸಗಳಿಗೆ ಹೋದರು. ಧರ್ಮನಂದನನು 'ನಿನ್ನ ರಾಜ್ಯಾಭಿವೃದ್ಧಿಯನ್ನು ನೋಡುತ್ತಿರುವದಲ್ಲದೆ ಎರಡನೆಯದೇನೂ ಆಶೆಯಿಲ್ಲ'ವೆಂದು ಅರಸನಿಗೆ ನುಡಿದನು. ಭೀಮ ನಕುಳ ಸಹದೇವ ಇವರಿಗೂ ದುರ್ಯೋಧನನ ತಮ್ಮನಪ್ಪ ಯುಯುತ್ಸಗನಿಗೂ ಬೇಡಿದ ನಾಡುಗಳನೆ ಕೊಟ್ಟು ಅರಸನು ಸಂತೋಷಬಡಿಸಿದನು. ವಿಬುಧವನಕಲಹಂಸನು ಪುರುಷೋತ್ತಮನಿಗೆ ಇಂತೆಂದನು:—

ಕಂ॥ ನಿನ್ನ ದಯೆಯಿಂದಮರಿನೃಪ ।
ರನ್ನೆರೆ ಕೊಂದೆಮಗೆ ಸಕಳರಾಜ್ಯಶ್ರೀಯುಂ ॥
ನಿನ್ನ ಬಲದಿಂದೆ ಸಾರ್ದ್ದುದು ।
ನಿನ್ನುಪಕಾರ ಮನದೇತರೊಳ್ ನೀಗುವೆನೋ ॥ ೩೭ ॥

ಎಂದು ಮುಕುಂದನನ್ನು ಅನುನಯ ವಚನರಚನಾಪರಂಪರೆಯಿಂದ ಸಂತಸಂಬಡಿಸಿ ನುಡಿದು, ಸಾತ್ಯಕಿಸೆರಸು ಅನರ್ಘ್ಯ ವಸ್ತುವಾಹನಸಹಿತಂ ದ್ವಾರಾವತಿಗೆ ಕಳಿಪಿ ಸಕಳ ಭುವನ ತಳಭಾರವನ್ನು ಆದಿಶೇಷನಂತೆ ತಳೆದನು. ಕವಿಯು ಅದನ್ನು ಹೀಗೆ ವರ್ಣಿಸಿದ್ದಾನೆ.

ಚಂ ॥ ಪಸದನಮಾವುದಾವ ಋತುವಿಂಗವುದೊಪ್ಪುಗುಮಾವ ಪೊಳ್ತುದಾ ।
ವೆಸಕದೊಳೊಂದುಗುಂ ವಿನಯಮಾವೆಡೆಗಾವುದು ಚೆಲ್ವುವೆತ್ತು ರಂ ॥
ಜಿಸುಗುಮದರ್ಕ್ಕದಂ ಸಮರಿ ನಿಚ್ಚಲುಮಾ ಬಿಯಮಾ ವಿನೋದಮಾ ।
ಪಸದನಮಾ ವಿಳಾಸ ದೊಳಡಂಬಡೆ ಭೋಗಿಸಿದಂ ಗುಣಾರ್ಣವಂ ॥ ೨೮ ॥

ಪಸರಿಸಿ ನೀಳ್ದು ತನ್ನ ಜಸದೊಳ್ ವೆರಸೊರ್ವನ ಕೀರ್ತ್ತಿ ತಳ್ತು ರಂ ।
ಜಿಸೆ ನೆಗಳ್ದಾದತನೇಂ ನೆಗಳ್ದನೆಂಬ ಚಲಂ ಮಿಗೆ ತನ್ನ ಪೆಂಪು ತ ॥
ನ್ನೆಸಕಮೆ ತನ್ನ ವಿಕ್ರಮಮೆ ತನ್ನ ನೆಗಳ್ತೆಯೆ ತನ್ನ ಮಾತೆ ತಾ ।
ನೆಸೆವ ಜಯತ್ರಯಕ್ಕೆನಿಸಿ ಪಾಲಿಸಿದಂ ನೆಲನಂ ಗುಣಾರ್ಣವಂ ॥ ೨೯ ॥

—:ಭದ್ರಂ ಶುಭಂ ಮಂಗಳಂ:—

---

ಶ್ರೀ

# ಸರ್ವಜ್ಞ

ಮಸ ಮಸಕು ಬೆಳಕಿನಲ್ಲಿ ಜ್ಯೋತಿರ್ಮಯಸ್ವರೂಪಿಯೊಬ್ಬನು ಕಾಣಿಸಿಕೊಂಡನು. ಕನಸಿನಲ್ಲಿ ತೇಲುತ್ತಿದ್ದ ಕರ್ಣಾಟಕದಲ್ಲಿ ಎಲ್ಲವೂ ನನಸಾಗಿ ಕನಸೇ ಇಲ್ಲದವನೊಬ್ಬನು ಹುಟ್ಟಿದನು. ಕನ್ನಡ ಹಕ್ಕಿಯಾಗಿ ಕನ್ನಡ ಶ್ರುತಿಯಲ್ಲಿ ನನ್ನಿ ಹಾಡನ್ನು ಇಂಪಾಗಿ ಹಾಡತೊಡಗಿದನು. ಭಿಕ್ಷುಕನಾಗಿ ತನ್ನ ಹೃದಯವನ್ನೇ ಏಕನಾದವನ್ನಾಗಿಸಿ ಕನ್ನಡದ ಮನೆ ಮನೆಯ ಬಾಗಲಿಗೆ ತಿರುಗಿದನು. ರಾಗಿಯಾಗಿ ಕನ್ನಡದ ಗಾಳಿಯಲ್ಲಿ ತನ್ನ ಕವಿತಾ ವೇಣುವಿನ ದನಿಯನ್ನು ಬೆರೆಸಿದನು. ವಿರಾಗಿಯಾಗಿ ಉಚ್ಚತರ ತತ್ವಬೋಧೆಯನ್ನದರಲ್ಲಿ ನುಸುಳಿಸಿದನು.

ಸಾಂಘಿಕಾಚಾರಗಳಿಗೆ ಸಂಜೆಗತ್ತಲು ಕವಿದಿದ್ದ ಸಂಧಿಸಮಯದಲ್ಲಿಯೇ ಅವನು ಹೊರಬಿದ್ದುದು. ಒಂದು ಲಂಗೋಟಿಯನ್ನು ಮಾತ್ರವೇ ತೊಟ್ಟು ದಿಗಂಬರನಾಗಿ ಸಕಲ ವಿಶ್ವವನ್ನು ಸಮರಸಭಾವದಿಂದಪ್ಪಿಕೊಳ್ಳುತ್ತ ನಡೆದನು. ಕೈಯಲ್ಲಿ ಒಂದು ಭಿಕ್ಷಾಪಾತ್ರೆ; ಹೆಗಲಮೇಲೊಂದು ಹರಕ ಕಂಬಳಿ. ಉಜ್ವಲತಪೋಕಾಂತಿಯಿಂದ ಹೊಳೆಹೊಳೆಯುವ ಕಣ್ಣುಗಳು. 'ಒಪ್ಪಭಸಿತ'ದಿಂದ ಭೂಷಿತವಾಗಿ ಯೋಗರಾಗದಿಂದರಂಜಿಸುತ್ತಿದ್ದ ಹಣೆ. (ಆಗಿನ ಕಾಲದ ಸಾಂಘಿಕ ಪರಿಸ್ಥಿತಿಯೇ ಅಂತಹ ಮಹಾ ಹೃದಯಕ್ಕೆ ಜನ್ಮ ಕೊಟ್ಟಿತು; ಆ ಮಹಾಹೃದಯವು ಮಾತ್ರ ನೂತ್ನ ಸಾಂಘಿಕ ಪರಿಸ್ಥಿತಿಗೆ ಜನ್ಮ ಕೊಡುವುದು ಸಾಧ್ಯವಾಗಲಿಲ್ಲ.)

ಹೀಗೆ ಜನ್ಮ ಕಳೆದ 'ಕುಲವಿಲ್ಲದ ಯೋಗಿ'ಯೇ ಸರ್ವಜ್ಞ ಮೂರ್ತಿ. ಎಳೆತನದಲ್ಲಿ ಸಾಂಸಾರಿಕ ದಿನಚರಿಗೆ ಬೇಸತ್ತು ನಗೆಮೊಗದಿಂದ ಅಡವಿಗಳ ಪಾಲಾಗಿ ತಿಳಿವನ್ನು ಕಂಡುಂಡಮೇಲೆ ದಿಗಂಬರಿಯಾಗಿ ಹುಚ್ಚನಂತೆ ಬೀದಿ ಬೀದಿ ತಿರುಗಿದನು. ಸಮಾಜದ ನಡೆನುಡಿಗಳನ್ನು ತೀವ್ರವಾಗಿ ಪರಿಶೀಲಿಸಿ

ದನು. ಜನಗಳ ಕತ್ತಲೆಯ ಬಾಳಿಗೆ ಅವನ ಹೃದಯ ಮರುಗಿತು. ಸ್ವಚ್ಛಂದ ಸ್ವಾತಂತ್ರ್ಯದಲ್ಲಿ ಬೆಳೆದ ಆ ಅಡವಿಯ ಮಗುವಿಗೆ ಈ ಸಂತೆಯ ಜನರಲ್ಲಿದ್ದ ಆಶೆಯ ಬಂಧನವು ವಿಪರೀತವಾಗಿ ಕಂಡಿತು. ಇವರ ಧನ ಮದವು ಬಡತನ ದಲ್ಲಿ ಬಲ್ಸಿರಿಯನ್ನು ಭೋಗಿಸಿದ ಅವನಿಗೆ ಸರಿದೋರಲಿಲ್ಲ. ತಮ್ಮ ಶಾಸ್ತ್ರ ವಿಜ್ಞಾನಗಳಿಂದ ಅಜ್ಞಾನದಲ್ಲಿ ತೊಳಲುತ್ತಿದ್ದ ಅವರ ಭವಿಷ್ಯವು ತಿಳಿವನ್ನು ಕಂಡು ಉಂಡ ಇವನಿಗೆ ಕಣ್ಣಿಗೆ ಕಟ್ಟಿತ್ತು. ಇವರ ಓದು ಬರೆಹದ ಬುದ್ಧಿಯ ಆಡಂಬರದ ಗರ್ವವು-ಪ್ರಕೃತಿಯ ಸ್ತನ್ಯಪಾನದಲ್ಲಿ ವಿದ್ಯೆಯನ್ನು ಕಲಿತ ಈ ಸರಳಜೀವಿಗೆ ಸೈರಿಸಲಿಲ್ಲ. ಮಡಿಯೆಂಬ ಹೊಲೆಯಲ್ಲಿ ಮುಳುಗಿದ್ದ ಘನದ ಪಂಚಮರಾದಿವರನ್ನು ನೋಡಿ ಅವನ ದೈವೀ ಹೃದಯವು ಆಕ್ರೋ ಶಿಸ ಸಾಗಿತು. ಆತ್ಮವಂಚನೆಯ ಸೆರೆಯಲ್ಲಿ ಸಿಕ್ಕ ಇವರನ್ನು ಕಂಡು, ಸತ್ಯ ವನ್ನು ಕಂಡು ಸತ್ಯದಲ್ಲಿ ಬದುಕಿ ಬಾಳಿದ ಅವನ ಮುಖವು ಕೆಂಪಾಯಿತು. ಇನ್ನವನಿಂದ ತಡೆಯುವುದಾಗಲಿಲ್ಲ. ಅವನ ಹೃದಯದ ಏಕನಾದವು ಅದ್ಭುತವಾದ ಪ್ರಲಯಗೀತಿಯನ್ನು ಹಾಡತೊಡಗಿತು.

ಎಂತಹ ಪ್ರಮಾದ! ಉರಿವ ಬೆಂಕಿಯನ್ನು ಹೂಗಳ ಜೆಲ್ಲಿ ಆರಿಸುವ ಪ್ರಯತ್ನ. ಕವಿತೆಯಲ್ಲಿ ಸಂಸ್ಕಾರ ತತ್ವವು ಲೀನವಾಗಿದೆ; ಸಂಸ್ಕರಣಕ್ಕೆ ಕವಿತೆಯು ಆಯುಧವಾಗಿದೆ. ಪ್ರಕೃತಿ ಸೌಂದರ್ಯದಲ್ಲಿ ಈಶ್ವರ ವರ್ಚಸ್ಸನ್ನು ಕಾಣುವ ಶಕ್ತಿ; ಜೆಲ್ವಿನ ತೆರೆಯ ಹಿಂದೆ ಅವನ ಮೋರೆಯ ಚಲುವನ್ನು ನೋಡುವ ಶಕ್ತಿ; ಕರುಣದಿಂದ ಹೃದಯವು ಕರಗಿಹೋಗಲು ಅದನ್ನು ಕೊಳಲಿನಲ್ಲಿ ಹರಿಯಿಸುವ ಶಕ್ತಿ; ಮಣ್ಣಿನಲ್ಲಿ ಭಗವದಾಕಾರವನ್ನೂ, ಸ್ವರೂಪವನ್ನೂ, ಮನೋಹರ ರೂಪ ಕಲ್ಪನೆಯನ್ನು ಸೃಷ್ಟಿಸುವ ಶಕ್ತಿ; ವಿಶಾಲಹೃದಯ, ಉದಾರಭಾವ, ಇವು ಇಲ್ಲವೇ ಇಲ್ಲ. ಕವಿತೆಯ ಕೋಮಲತೆಯ ನಡುವೆ ಹರಿಹರಿಯ ಬೇಕಾದ ಪ್ರೇಮರಸವಡಗಿ ಹೋಗಿದೆ. ಇವೆಲ್ಲವನ್ನು ಹೊರಗೆ ದಬ್ಬಿ ಆಗ್ರಹ, ಖಂಡನೆ, ಅಸಹಿಷ್ಣುತೆ, ಮಣ್ಣಿನಲ್ಲಿ ಮಣ್ಣನ್ನೇ ಕಾಣುವುದಲ್ಲದೆ, ಕಂಡರೂ ಮೂರ್ತಿಯನ್ನು ಒಡೆದು ಮಾಯ

ವನ್ನಳಿಸಿ ಅದರಲ್ಲಿ ಮಣ್ಣನ್ನೇ ತೋರಿಸುವ ಸತ್ಯಪ್ರಕಟನೆ, ಸಂಸ್ಕಾರತ್ವಾದಿ ಒರಟು ಗುಣಗಳು ಹೊರಗೆ ಬಂದು ನಿಂತು ನಾಟ್ಯವಾಡುತ್ತಲಿವೆ. ಎಷ್ಟು ದಾರುಣ! ರಾಗವೈರಾಗ್ಯಗಳ ಸಮ್ಮೇಳನ; ಕೋಗಿಲೆಯ ಕಲಗಾನವು ಕೊನೆಯಲ್ಲಿ ಭೋರಿಡುವ ಭೇರೀನಿನಾದವಾಗಿ ಪರಿಣಮಿಸಿದೆ. ಹೊಳೆಯ ಹಾಡಿನಲ್ಲಿ ಸಾಗರದ ತರಂಗಗಳ ಭೋರೆಂಬ ಕರ್ಕಶವಾದ ಕೂಗು ಕೇಳ ಬರುತ್ತಿದೆ. ಸೃಷ್ಟಿಯಿಂದ ನಾಶನ; ನಾಶನದಿಂದ ಸೃಷ್ಟಿ. ಮಾಯುವನ್ನು ನಾಶಮಾಡುವುದಕ್ಕೆ ಸೃಷ್ಟಿಯೇ ಸಾಧನವಾಗಿದೆ. ಎಷ್ಟು ದಾರುಣ!

ಸರ್ವಜ್ಞನು ಹಕ್ಕಿಯಂತೆ ಹಾಡಿದವನೇ ಹೊರತು, ಹಾಡಿದ ಹಾಡು ಮನೋಹರವಾಗಿರಬೇಕೆಂದು ಬಯಸಿದವನಲ್ಲ. ಅವನ ಪ್ರತಿಭೆಯು ಎಷ್ಟು ಸಾಮನ್ಯವಾದುದೋ ಅವನ ನಾಲಗೆಯೂ ಅಷ್ಟು ಅಸಂಸ್ಕೃತ. ಅವನ ಕಣ್ಣು ಕಂಡುದನ್ನೂ-ಅವನ ಕಿವಿ ಕೇಳಿದುದನ್ನೂ-ಅವನ ಮೆದುಳು ಆಲೋಚಿಸಿದುದನ್ನು-ಹಾಗೆಯೇ ಅವನ ನಾಲಗೆಯು ಹೊರಗೆಡಹಲಾರದೆ ಹೋಯಿತು. ಮಾಳ್ಕೆಯಲ್ಲಿ ಅವನು ವಿಜಯಶಾಲಿಯಾಗಿರಬಹುದು; ಆದರೆ ಹೇಳುವಿಕೆಯಲ್ಲಿ ಅಷ್ಟು ಕುಂಟು ಬಿದ್ದಿದ್ದಾನೆ. ಹೂಗಳನ್ನು ಸೃಷ್ಟಿಸಿದನೇ ಹೊರತು ಅವಕ್ಕೆ ನರುಗಂಪನ್ನು ಕೊಡಲಾರದೆ ಹೋದನು. ಅವನ ಹೂವಿನಲ್ಲಿ ಮುಳ್ಳೇ ಹೆಚ್ಚು; ಹೂವಿನ ಮರೆಯಲ್ಲಿ ಹಾವಿನಹಲ್ಲೂ ಅಡಗಿದೆ. ಹೊಸ ಹರೆಯದ ಹುಡುಗಿಯನ್ನೇನೋ ಸೃಷ್ಟಿಸಿದನಾಗಲಿ—ಚೆಲುವನ್ನು ಎರೆಯಲಿಲ್ಲ. ಅವನು ಹಾಡಿದ ಹಾಡು ಪ್ರೇಮಗೀತವಲ್ಲ, ಸಮರಸಂಗೀತ; ಕೊಟ್ಟಿಲ ಹಾಡಲ್ಲ—ಸಿಟ್ಟಿನಿಂದೊಗೆದ ಭೇರೀನಿನಾದ.

ಇವನಲ್ಲಿ ಕವಿಯಾಗಬೇಕೆಂಬ ಆಶೆಯೇ ಇಲ್ಲ; ಯೋಗಿಯಾಗ ಬೇಕೆಂಬ ಆಶೆಯೇ ತುಂಬಿದೆ. ಆದುದರಿಂದಲೇ ಪಂಡಿತರ ಹಳೆಯ ದಾರಿಯನ್ನು ತುಳಿಯಲಿಲ್ಲ. ಪಾಂಡಿತ್ಯ ಪ್ರದರ್ಶನೆ—ರಾಜಾನುಗ್ರಹ—ಥಕ್ಕೆ ಬಿರುದಾವಳಿಗಳನ್ನು ಅವನು ಬಯಸಲಿಲ್ಲ. ಅಡವಿಯ ಹಕ್ಕಿಗಳೊಡನೆ ಸ್ವಾತಂತ್ರ್ಯಗೀತಿಯನ್ನು ಹಾಡಿದ್ದ ಅವನಿಗೆ ಹಿರಿಯರ ಬಂಧನವು ಸೇರ

ಲಿಲ್ಲ. ಒಂಟಿಯಾಗಿ ಕನ್ನಡದ ಮರದ ಮೇಲೆ ಕುಳಿತು ತನ್ನ ಹಾಡನ್ನು ಹಾಡತೊಡಗಿದನು. ಯಾರಿಗೆ ರುಚಿಸೀತು ಯಾರಿಗೆ ರುಚಿಸದು ಎಂಬುದು ಅವನಿಗೆ ಬೇಕಿರಲಿಲ್ಲ.

ಸರಳತೆಯೇ, ನಿರಾಭರಣವೇ ಇವನ ಕವಿತೆಯ ಬಣ್ಣ. ಅದು ಇವನ ಜೀವಿತದಿಂದ ಬಂದ ಗುಣ. ಅವನಾಯ್ದುಕೊಂಡಿರುವ ಸಾಮಾನ್ಯ ಹೋಲಿಕೆಗಳು, ಅವನು ನಡೆದ ದಾರಿ, ಅವನ ರೀತಿ ಎಲ್ಲವೂ ಆ ವಿಶುದ್ಧ ಜೀವಿಯ ಸರಳತೆಯನ್ನೇ ಸಾರುತ್ತಲಿವೆ. ಅಂತಃಕರಣಕ್ಕೆ ಚಾಚೂ ತಪ್ಪದಂತೆ ಬಾಳ್ಕೆಯಲ್ಲಿಯೂ ಬಾಳ್ಕೆಯ ತೆರದಲ್ಲಿಯೂ ಅವನು ಸರಳತೆಯನ್ನೇ ಪೋಷಿಸಿದನು. ಅವನ ಬಾಯಿಂದ ಹೊರಬಿದ್ದುದೆಲ್ಲ ಸ್ವಾಭಾವಿಕ ಯೋಚನೆಯ-ಸಹಜಾನುಭವದ ಸಂತಾನ. ಎಲ್ಲ ಕಳೆಗೂ, ಎಲ್ಲ ವಿಶುದ್ಧ ಜೀವಿತಕ್ಕೂ ಬೇಕಾದ, ನಡೆಗೂ ನುಡಿಗೂ ಇದ್ದ ಸಕಲಸಂಬಂಧವೇ ಈ ಸಾರಳ್ಯಕ್ಕೆ ನೀರುಹಾಕಿ ಬೆಳೆಸಿತು.

ಕನ್ನಡ ಸಾಹಿತ್ಯವೇ ಅವನ ಜಾತೀಯತೆಗಾಗಿ, ಕಷ್ಟಪಡದೆ ಭಾವವನ್ನು ವಿಶದೀಕರಿಸುವ ಗುಣಕ್ಕಾಗಿ (ease of expression), ಜಾತೀಯಗಳಿಗಾಗಿ (Idiom), ಅವನ ಶೈಲಿಗಾಗಿ, ಅವನ ಸಂಗ್ರಹ ಶಕ್ತಿಗಾಗಿ (epigramatic style) ಋಣಿಯಾಗಿದೆ. ಶಬ್ದಗಳಲ್ಲಿ ಐಕ್ಯವಾದ ಶಕ್ತಿಯನ್ನು ಇವನು ತಿಳಿದಿದ್ದನು. ಎಲ್ಲೆಲ್ಲಿ ಯಾವ ಪದವನ್ನು ಪ್ರಯೋಗ ಮಾಡಿದರೆ ಎಷ್ಟು ಅರ್ಥ ಕೊಡುವುದೋ ಎಂಬುದನ್ನು ಅವನಂತೆ ಬಲ್ಲವರು ಯಾರೂ ಇಲ್ಲ. ಅವನ ಕಲಾಕುಶಲತೆಯು ಇಲ್ಲಿ ಕೊಟ್ಟ ಕೊನೆಯ ಬಣ್ಣವನ್ನೇ ಕಳೆದಿದೆಯೆಂಬುದನ್ನು ನಿರಸಿಸುವ ಕಳಾಭಿಜ್ಞರು ಯಾರೂ ಸಿಗಲಾರರು. ಕನ್ನಡ ನುಡಿಗೆ ಇಂತಹ ತೊಡವನ್ನು ಯಾರೂ ತೊಡಿಸಲಿಲ್ಲ; ತೊಡಿಸುವ ಶಕ್ತಿಯು ಆ ರಾಜಾಸ್ಥಾನದ ಪಂಡಿತ ಪ್ರಚಂಡರಿಗಿರಲಿಲ್ಲವೆಂದೇ ನನ್ನ ನಂಬಿಗೆ. ಅವನ ಪ್ರತಿಯೊಂದು ಪದದಲ್ಲಿಯೂ ಅವನೀ ವಿಲಕ್ಷಣತೆಯು ಸುಳಿಯುತ್ತಿದೆ. ಅವನ ಕೈಯಲ್ಲಿನ ಭಾವಾದೀಪವು ತೀಕ್ಷ್ಣಕಾಂತಿಯನ್ನು

ಬೀರುತ್ತ ಬೆಳಗುತ್ತಿದೆ. ಪದಗಳು ಅವನ ಕೈಯಲ್ಲಿ ತಾರೆಯಂತೆ ನಾಟ್ಯವಾಡುತ್ತಲಿವೆ. ಅವನ ಹೋಲಿಕೆಗಳೆಲ್ಲ ಜೀವಕಳೆಯಿಂದ ತುಂಬಿ ನಗುತ್ತಿವೆ. ಹಾಸ್ಯರಸವು ನಡುನಡುವೆ ಮಿಂಚಿನಂತೆ ಹೊಳೆಹೊಳೆಯುತ್ತಿದೆ.

ಕವಿತೆಯಲ್ಲಿ ಬೆರೆತು ಕಾಣಬರುತ್ತಿದೆ ಕವಿಯ ವ್ಯಕ್ತಿತ್ವ. ತನ್ನನ್ನು ತಾನೇ ಗೌರವಿಸಿಕೊಳ್ಳುವುದು ಕೆಟ್ಟ ಚಾಳಿಯೆಂದು ಹಲವರ ಮತ. ಆದರೆ ಅವನ ಜಾತಿಯ ಕವಿಗಳಿಗೆಲ್ಲ ಈ ತೆರದ ಆತ್ಮವಿಶ್ವಾಸವಿರುವುದು ಸಹಜ. Milton, Wordsworth, Tennyson ರಲ್ಲಿ ಈ ಗುಣವು ಸೌಂದರ್ಯದೊಡನೆ ಬೆರೆತು ರಮ್ಯವಾಗಿ ರಂಜಿಸಿದೆ. ಈ ಗುಣವನ್ನು ಅಹಂಭಾವವೆಂದು ಕರೆದರೆ ಅದು ಅದ್ಭುತ ಶಕ್ತಿಯಿಂದೊಗೆದುದು. ತನ್ನ ವ್ಯಕ್ತಿತ್ವದ ಗುಟ್ಟನ್ನು ಅರಿತ ತೇಜಸ್ವಿಯು ಒಂದು ಸಂದೇಶವನ್ನು ಸಾರಲು ಹೊರಟು, ತನ್ನ ಸುತ್ತ ಇರುವ ಹುಸಿಯಾದೆಲ್ಲ ಉಳಿದ ವ್ಯಕ್ತಿತ್ವಕ್ಕೆ ಕಿಡಿಹಚ್ಚಿ ಅವನ ಮತಗಳನ್ನು ಸುಡುತ್ತದೆ. ಈ ಶಕ್ತಿಯು-ನೈತಿಕ ಬಲಕ್ಕೆ ಜತೆಯಾಗಿ ಎಲ್ಲವನ್ನು ಗೆಲ್ಲುವ ಚೆಲುವಿನ ಬಲವನ್ನು ಕೊಡುವ ಕವಿಯಲ್ಲಿದ್ದರೆ-ಹತ್ತು ಪಾಲು ಹೆಚ್ಚು ಫಲಕಾರಿಯಾಗುತ್ತದೆ. ಆದರೆ ಈ ಸಿದ್ಧಾಂತವು ಎಲ್ಲ ಬಣಗು ಕವಿಗಳಿಗಲ್ಲ. ಜೀವಗಲ್ಲುಗಳಿಂದ ನಡೆನುಡಿಯನ್ನು ಗ್ರಹಿಸಿದ ಧೀರರಲ್ಲಿ ಈ ಶಕ್ತಿಯು ಹೊಕ್ಕು, ಅವರ ಕವಿತೆಯಲ್ಲಿ ಹರಿಹರಿದು, ಅದರಲ್ಲಿ ನೈತಿಕ ಧರ್ಮವನ್ನು, ಆಧ್ಯಾತ್ಮಿಕ ಬಲವನ್ನು, ರೀತಿಯ ವೈಭವವನ್ನು, ಸ್ವಲ್ಪ ಹೆಚ್ಚು ಕಡಮೆ ಅವರವರ ವ್ಯಕ್ತಿತ್ವಕ್ಕೆ ತಕ್ಕಂತೆ ಬೆರೆಸಿಬಿಡುತ್ತದೆ. ಕವಿಗೂ ಮಾನವ ವರ್ಗಕ್ಕೂ ಇರುವ ಸಮೀಪ ಸಂಬಂಧದ, ಆ ಸಂಬಂಧವು ಇವನಿಗೆ ಕೊಡುವ ಅಧಿಕಾರದ, ಆ ಅಧಿಕಾರದಿಂದ ಇವನ ಪಾಲಿಗೆ ಬಂದ ಕರ್ತವ್ಯದ ಅರಿವು ಸರ್ವಜ್ಞನಿಗೆ ಚೆನ್ನಾಗಿ ತಿಳಿದಿದ್ದು ಕಲಾಕುಶಲನ ಕಲೆಯ ಅಂಗವಾಯಿತು ; ಅವನು ಗೀಚಿದ ಪ್ರತಿಯೊಂದು ಗೆರೆಯಲ್ಲಿಯೂ ಹರಿಯಿತು.*

---

* Any individuality, conscious of itself, respecting itself because of its faith in a sacred mission entrusted to it and

ಸರ್ವಜ್ಞನ ಕವಿತೆಯಲ್ಲಿ ಸಂಸ್ಕಾರಕತ್ವ ಸೇರಿ ಕವಿತೆಯನ್ನು ಅಡ್ಡ ಹಾದಿ ಚೆಲುವನ್ನು ಅಳಿಸಿದೆ; ಮೋಹಕ ಶಕ್ತಿಯನ್ನು ಕಡಮೆಮಾಡಿದೆ. ಕವಿಯು ಕವಿತೆಯ ವಸ್ತುವಲ್ಲದ ಆವ ವಿಷಯವನ್ನೇ ಆಯ್ದುಕೊಂಡರೂ ಜನರಿಗದರಿಂದು ಪಯೋಗವಾಗಲಾರದು. ಅದನ್ನೇ ಗದ್ಯದಲ್ಲಿ ಹೇಳಿದರೆ ಅದರಿಂದ ಇದಕ್ಕೂ ಇದರಿಂದ ಅದಕ್ಕೂ ಬಣ್ಣ ಬರುತ್ತದೆ. ವಾದ್ಯದ ನಾದಕ್ಕೆ ಶ್ರುತಿಸೇರಿ ಇಂಪಾಗುತ್ತದೆ. ಅಲ್ಲದೆ ಕವಿತೆಯೇ ಆ ವಿಷಯ ಪ್ರತಿಪಾದನೆಗೆ ಸಾಧನವಾದರೆ ಅದು ವಿಜಾತೀಯವಾಗಿ ಪರಿಣಮಿಸುತ್ತದೆ; ಅಸ್ವಾಭಾವಿಕವಾಗಿ ತೋರುತ್ತದೆ; ಉದ್ದೇಶಕ್ಕೆ ಭಂಗ ತರುತ್ತದೆ. ಸರ್ವಜ್ಞನು ಕವಿಯಾಗದೆ ವೇದಾಂತಿಯಾಗಿದ್ದರೆ ಚೆನ್ನಾಗಿತ್ತು; (ಸ್ವಾರ್ಥ ದೃಷ್ಟಿಯಿಂದ ವೇದಾಂತಿಯಾಗದೆ ಕವಿಯಾಗಿದ್ದರೆ ಚೆನ್ನಾಗಿತ್ತೆಂದು ನನ್ನ ಹಾರೈಕೆ) ಅವನ ಅಸಂಸ್ಕೃತ ಜಿಹ್ವೆಯು ಎಷ್ಟೇ ಪ್ರತಿಬಂಧಕವಾಗಿದ್ದರೂ ಅವನ ಉದ್ದೇಶ ಸಾಧನೆಗೆ ಅದೇ ಸರಿಯಾದ ದಾರಿ. ಸರ್ವಸಮತ್ವವನ್ನು ಸ್ಥಾಪಿಸಿ ಜನರನ್ನು ಮಾಯಾಡಂಬರದ ಕತ್ತಲಿನಿಂದ ಹೊರಗೆ ತರುವ ಅವನ ಸಂಕಲ್ಪ ಸಾಧನೆಗೆ ಅವನು ಬೇರೆಯ ವೇಷವನ್ನೇ ತಳೆಯಬೇಕಾಗಿತ್ತು.

---

beneath which it may not fall without dishonour, lifts and kindles other individualities, and exalts their view of human life. It does the work with tenfold greater force when it is in a poet, that is, one who adds to its moral force the all subduing power of beauty. This conviction, which cannot belong to a weak poet, but does (when it is consistent throughout life) belong to poets whose nature is hewn out of the living rock, enters as stateliness into all their verse, gives it a moral virtue, a spiritual strength, and emerges in a certain grandeur or splendour of style, more or less fine as the character is more or less nobly mixed.

Stopford Brooke—Tennyson, His Art and Relation to Modern Life.

ನಾನು ಸರ್ವಜ್ಞನನ್ನು ದೂರುತ್ತಿಲ್ಲ. ಇದ್ದ ಸಂಗತಿಯನ್ನೇ ಊಹಿಸಿದ್ದೇನೆ. ಅವನ ಇರವೇ ಅಂತಹ ಇಕ್ಕಟ್ಟಿನದಾಗಿತ್ತು. ಅವನ ಸಂಸ್ಕಾರಕತ್ವವಾದರೂ ಆಗಿನ ಸಾಂಘಿಕ ಪರಿಸ್ಥಿತಿಯೇ ಕಾರಣ. ಆ ಸಾಂಘಿಕ ಸ್ಥಿತಿಯೇ ಅವನ ಸಗ್ಗಿಯ ಬೆನ್ನಿನ ಮೇಲೆ ಬಾಚುಂಡೆ ಯೇಳುವಂತೆ ಮಾಡಿತು; ಅದೇ ಶ್ರುತಿಯಲ್ಲಿಯೇ ಲೀನನಾಗಿ ಅವನು ಹಾಡಿದ ಹಾಡೂ ನಮ್ಮ ಬೆನ್ನಿನ ಮೇಲೆ ಬಾಚುಂಡೆಗಳನ್ನು ಮೂಡಿಸುತ್ತಿದೆ.

ಈ ಬಗೆಯ ಕವಿಗಳಲ್ಲಿ ತಿಳಿವು ಚೆಲುವುಗಳ ಮೇಲನವಿರಬೇಕು. ಅವೆರಡೂ ಕೈಗೆ ಕೈಸೇರಿಸಿ ಕಿರುದನಿಯಲ್ಲಿ ರಾಗವನ್ನೆಳೆಯುತ್ತ ನಡೆವಸೆಂದರೆ ಕವಿತೆಯು ಇಂಪು ಕೊಡುತ್ತ, ಸೊಂಪು ಬೀರುತ್ತ ಸಮ್ಮೋಹನಾಸ್ತ್ರವಾಗಿ ಪರಿಣಮಿಸುತ್ತದೆ. ಸರ್ವಜ್ಞನು ತಿಳಿವನ್ನು ಕಂಡವನು; ಆದುದರಿಂದ ಕವಿತೆಯಲ್ಲಿ ತಿಳಿವು ಹೊಳೆ ಹೊಳೆಯ ಹತ್ತಿದೆ. ಆದರೆ ನಮ್ಮ ದುರದೃಷ್ಟದಿಂದ ಚೆಲುವು ಮಾಯವಾಗಿದೆ. ಚೆಲುವಿನ ನಡುವೆ ಹುದುಗಿ ಹೊಳೆಯಬೇಕಾದ ತಿಳಿವು ಪೃಥಗ್ವಿಕಾಸವನ್ನು ಹೊಂದಿ ಚೆಲುವನ್ನು ಅಳಿಸಿಬಿಟ್ಟಿದೆ. ಕವಿಯು ವೇದಾಂತಿಯನ್ನು ಅಡ್ಡ ಹಾದಿಗೊಯ್ದಿದ್ದಾನೆ; ಸಂಸ್ಕಾರಕನಾದ ವೇದಾಂತಿಯು ಕವಿಯನ್ನು ತನ್ನ ಕಾಲಕೆಳಗೆ ತುಳಿದುಬಿಟ್ಟಿದ್ದಾನೆ.

---

# ಒಂದು ಕಥೆ

ಕಥೆಯನ್ನು ಬರೆಯಬೇಕೆಂದು ಸಂಪಾದಕರ ಆಗ್ರಹ ಬಹಳ. ನನಗಂತೂ ಶಕ್ತ್ಯಭಾವದ ಕೊರತೆ ಬಹಳ. ಈ ಎರಡರ ಹೋರಾಟದಲ್ಲಿ ನನಗೆ ಸಹಾಯವಾಗಿಯೂ, ಅವರಿಗೆ ಸಮಾಧಾನವಾಗಿಯೂ ಪ್ರಕೃತದ ಹುಡುಗಾಟ ಬೈಲಿಗೆ ಬಂತು. ಇದು ನನ್ನ ಅಕ್ಕನ ಜೀವಿತದ ಕೊನೆಯ ಕ್ರೂರ ಮಧುರ ನಿಮಿಷಗಳ ಬರೆಹ. ನನ್ನ ಅಕ್ಕನ ಹೃದಯಾಂತರಾಳದ ರಸೋನ್ಮಾದವು ಯಾರಿಗೆ ಸೇರದಿದ್ದರೂ ನನಗಂತೂ ಸೇರಿಯೇ ಸೇರಬೇಕಷ್ಟೆ ?

ಇದು ಕಥನವೇ ಇರಬಹುದಾಗಲಿ ಕಥೆಯೇನೂ ಅಲ್ಲ. ವಸ್ತುಭಾಗವು ಪದ್ಯೋಚಿತ ರಸಪ್ರವಾಹ ; ಅವತಾರವು ನಾಟಕದ ಒಂದು ಉದ್ದವಾದ ಸ್ವಗತದಂತಿದೆ. ಈಗಿನ ಅನೇಕ ಬರೆಹಗಾರರ ಸಾಹಸದಂತೆ ಇದೂ ಒಂದು ; ಗದ್ಯದ ಸೋಗಿನಪದ್ಯ-ಮಾತಿನ ಹಾಡು. ಹಾಕಿರುವ ವೇಷ ಸಮಂಜಸವಾದರೂ ಅಲ್ಲದಿದ್ದರೂ ನನ್ನ ಅಕ್ಕನ ಹೃದಯವು ಇದರಲ್ಲಿ ಅರಳಿರುವುದೆಂದೇ ನನ್ನ ಭಾವನೆ. ವೇಷ ಸಾಮಂಜಸ್ಯವನ್ನು ಗಮನಿಸುವವರು, ನನ್ನಂತೆ ತಂಗಿಯರೇ ಆದರೆ :—

*        *        *        *

---

# ಕೊನೆಯುಗಳಿಗೆಯಲ್ಲಿ

"ನವರಾತ್ರಿಯ ನೆನಪು-ನನಗೆ ಅತಿಶಯ ಮಧುಮಧುರೋನ್ಮಾದಾನಂದ ದಾಯಿಯಲ್ಲವೆ! ಹೋದ ವರುಷ ಇದೇ ದಿನ ಅನಂತನಿಗೆ ಜ್ವರ ಬಂದಿತ್ತು; ಅದರ ಹಿಂದೆ ೨ ದಿನದಿಂದ ನಡೆದಿದ್ದ ಅವರಿವರ ಹೊಟ್ಟೆಕಿಚ್ಚು ಸಂಶಯಗಳ ನಡುವೆಯೇ ಬೆಳೆದು ಬಂದ ಒಂದು ವಿಧವಾದ ಆ ಮನೋಭಾವ! ಆಗ ಅವನ ಮನಸ್ಸಿನಲ್ಲಿ ತರಂಗಿತವಾಗುತ್ತಿದ್ದ ಚಿತ್ರ ವಿಚಿತ್ರ-ಮಧುರ ಮನೋಹರ-ಆಶ್ಚರ್ಯಾನಂದಕರ ಭಾವನೆಗಳು! ಅಂದಿನ ಆ ನಿರ್ಜನ ನಿಮಿಷದ ಆನಂದ! ಎಲ್ಲರೂ ನಾಟಕಕ್ಕೆ ಹೋಗಿದ್ದರು. ಆ ಸದ್ದಿಲ್ಲದ ಸಮಯದಲ್ಲಿ-ಪ್ರಶಾಂತ ಗಂಭೀರತೆಯಲ್ಲಿ-ನನ್ನ ಹೃದಯವನ್ನವನ ಹೃದಯದಲ್ಲಿ ತೇಲಿಬಿಟ್ಟ ಹಿಂದಿನ ಇಂದೂ ಕಣ್ಣಿಗೆ ಕಟ್ಟಿದ-ಅವತಾಳ್ಯ ಪ್ರಸಂಗದ ಬೆಲೆ ಕಟ್ಟಲು ನಾವು ಯಾರು! ಎಂಥ ಅಮಾನುಷೇಯ ನಿಮಿಷವದು! ಎಂಥ ಅಸಾಮಾನ್ಯ ಮಧುರತರ ನಿಮಿಷವದು!

ನೆನೆಯುತ್ತ ನೆನೆಯುತ್ತ ಕಣ್ಣೀರು ಉಕ್ಕುತ್ತಿದೆ, ಮುತ್ತಿನಂತುರುಳುತ್ತಿದೆ; ಹೃದಯವು ಮನೋಹರ, ಅನಿರ್ವಚನೀಯಾನಂದದಿಂದುಬ್ಬುತಿದೆ; ವೈಶಾಖದುದಯದ ಹೊಂಬಣ್ಣವನ್ನು ನೋಡಿ ಕವಿ ಹೃದಯ ವುಕ್ಕುವಂತೆ; ಕೋಟೆಕೊತ್ತಲ ಗೆದ್ದಾಗ ನಾಯಕನಿಗೆ ಎದೆಯುಬ್ಬುವಂತೆ. ಆ! ಅದೆಷ್ಟು ಬೇಗನೆ ಒಂದಾಗಿ ಹೋದೆವು! ಮಿಳನದಲ್ಲಿ-ಆಪ್ತತೆಯ ದೃಡತೆಯಲ್ಲಿ-ಅದೆಂತಹ ಅಸಾಮಾನ್ಯವೇಗ! ಅನಿಸಿದ್ದೇ ತಡ; ಆಡಿದ್ದೇ ತಡ; ಮೊಳ್ಳೆಯೇ ಆಯಿತು. ಅದೆಂತಹ ರಸೋನ್ಮಾದದ ಆನಂದಭಸಿದಿಂದ ಸ್ನೇಹಸಾಗರದಲ್ಲಿ ಮುಳುಗೇಳುತ್ತೆ ನಾಟ್ಯವಾಡುತ್ತೆ ಕ್ರೀಡಿತೆವು. ಕೆಲವರಿಗೆ ಅದು ಅಸೂಯಾಜನಕವಾಯಿತು; ಕೆಲವರಿಗೆ ಚಪಲರ ಬೆಸ್ನಿಸಿತು; ಕೆಲವರಿಗೆ ಒಡೆಯಲು ಬಾರದ ರಹಸ್ಯ. ನಮಗೇನೋ ಗೊತ್ತಿತ್ತು. ಹಾಡಿನಂತೆ ಸುಲಭವಾದ ಆ ಹಾಲ ಸವಿಯ ಹೊತ್ತು!

ಆಗ ಜಗತ್ತು ನಮಗೆ ಸಂಕುಚಿತವಾಗಿ-ನಾವಿಬ್ಬರೇ ಒಂದು ಜಗತ್ತನ್ನು ಸೃಜಿಸಿ ಅದರಲ್ಲಿ ನಾವೇ ನಾವಾಗಿ ಸುಳಿದೆವು. ಎಂಥ ಕಾವ್ಯಮಯ ಜೀವನವದು ! ಅದೆಂತಹ ಅಖಂಡಮೋಹಿನೀ ಗಾನಶ್ರವಣಾನಂದಾನುಭವ ! ಪ್ರೇಮ ನದಿಯ ಅವಿಚ್ಛಿನ್ನಧಾರೆಯೊಡನೆ ಕಲಕಲನಿನಾದದಿಂದ ಕಿಲಕಿಲ ನಗುತ್ತ ನಲಿಯುತ್ತ ಹರಿಯುತ್ತಿದ್ದಿತು. ಆಳ ತಿಳಿಯದಿದ್ದರೂ ನದಿಯಲ್ಲಿ ಪ್ರವೇಶಿಸಿದುದು ಅದೆಂಥ ಧೈರ್ಯೋನ್ಮಾದ ! ಎಂಥ ಅನಿರ್ವಚನೀಯತೆ !

ನಡುನಡುವೆ ಬಂದ ಅಡಚಣೆಗಳಿಂದಲೇ ಅದರಲ್ಲಿ ಮತ್ತಿಷ್ಟು ಮಧುರತೆ ಮೂಡಿತು. ಇತರರ ಹೃದಯ ದ್ವಾರವು ಸಂಕುಚಿತವಾದಂತೆಲ್ಲ ನಮ್ಮ ಹೃದಯವೈಶಾಲ್ಯ ವಿಕಸಿಸಿತು. ಆ ಪ್ರೇಮತಾರುಣ್ಯಾಭರದುತ್ಸಾಹಕ್ಕೆ ಅದೇ ಸಾಕ್ಷಿ.

ಆ ಮೇಲೆ ಕೈ ಹಿಡಿದು ಹೊಳೆಯೊಳಗೆ ಈಸಹತ್ತಿದೆವು. ಆಗಲೂ ಬಂಗಾರದಂಥ ಗಳಿಗೆಗಳು ಆಗಿ ಹೋಗಿದ್ದಿಲ್ಲ. ಆದರೆ ಬರಬರುತ್ತ ಅದು ನಮ್ಮ ಸ್ವಭಾವದಲ್ಲಿಯೇ ಲೀನವಾಯಿತು.

ಆಮೇಲೆ-ಆಮೇಲೆ-ಏನೋ ನನ್ನ ಭಾವನೆಯ ಹಕ್ಕಿ ರೆಕ್ಕೆ ಕೆದರದು. ಎಲ್ಲಾ, ಎಲ್ಲಾ ಮಸಕು ಮಸುಕು.—

ಇಂದು ಅದೇ ದಿನ-ಅದೇ ಹೊತ್ತಿನಲ್ಲಿ ನನಗೆ ಅತಿಶಯವಾದ ಜ್ವರ. ಮಧ್ಯರಾತ್ರಿ; ತೆರೆದಿದ್ದ ಕಿಟಕಿಯೊಳಗಿಂದ ಚಂದ್ರ ನಕ್ಕು ನಕ್ಕು ಹಳೆಯ ಕತೆಯ ನೆನಪು ಮಾಡುತ್ತಿದ್ದಾನೆ. ಮೆಲ್ಲನೆ ನಾನೂ ಭಾವನಾ ಪಕ್ಷಗಳನ್ನು ಬಿಚ್ಚಿ ವಿಹರಿಸಹತ್ತಿದೆನು. ಎಲ್ಲಾ ಒಂದು ತರದ ಶ್ರುತಿ ಮೀಟಲಾರಂಭಿಸಿದುವು. ಚಂದ್ರ ನಗುನಗುತ್ತ ಶೃತಿ ಸೇರಿಸಿದ; ನನ್ನ ಹೃದಯದಲ್ಲಿ ಆವುದೋ ಒಂದು ಹಾಡು ಅತಿ ಕೌಶಲದಿಂದ ಬಾರಿಸಲ್ಪಟ್ಟು ತರಂಗಿತವಾಗುತ್ತಿದೆ. ಎಲ್ಲವೂ ಅದೊಂದೇ ಗೀತಿಯೊಡನೆ ಸಮರಸ

ಭಾವದಲ್ಲಿ ನಗಲು ಮೊದಲಿಟ್ಟಿವೆ. ಎಲ್ಲಾ ಒಂದೇ ಒಂದು ಮಧುರಗಾನ ಒಂದೇ ಒಂದು ಎಳೆಯ ಮಗುವಿನ ಕಿಲಕಿಲನಗು.

ಆದುದಕ್ಕಿಂತ ಅದರ ನೆನಪು ಎಷ್ಟು ಮಧುರ! ಪ್ರಸಂಗವು ಎಷ್ಟೇ ಕಷ್ಟತರವಾಗಿದ್ದರೂ ಬಹಳ ದಿನಗಳ ಮೇಲೆ ಅದರ ನೆನಪು ಅಷ್ಟು ಮಧುರ. ಅದರಲ್ಲಿ ಆಗ ಒಂದು ತೆರನಾದ ಜೀತಾಭಾವವು ಅಡಗಿರುತ್ತದೆ.

ಕಿಟಿಕಿಯಿಂದ ಯಾರೋ ಹಣಿಕಿ ನೋಡುತ್ತಿದ್ದಾರೆ. ಎದ್ದು ನೋಡಿ ಬಂದೆ ಯಾರೂ ಇಲ್ಲ; ಅನುಮಾನದಿಂದ ಮತ್ತೆ ಹುಡುಕಿದೆ, ಯಾರೂ ಇಲ್ಲ. ಬಂದು ಮಂಚದ ಮೇಲೆ ಮಲಗಿದೆ. ಅಮ್ಮ ಮಗ್ಗುಲಲ್ಲೇ ಇದ್ದಾಳೆ.

ಮತ್ತೆ ಯಾರೋ!—ನನ್ನ ಅನಂತ. ಕಿಲಕಿಲ ನಗುತ್ತ ನಿಂತಿದ್ದಾನೆ. ಆನೆಯಿಂದೆದ್ದೆ-ಮತ್ತೆ ಭ್ರಮೆಯ ಮೋಸ! ಹೊರಗೆ ಬಂದು ನಿಂತೆ! ಬೆಳ ದಿಂಗಳು-ಬಿಳಿಯ ಮುಗಿಲು-ಎಲ್ಲಾ ನನ್ನನ್ನು ಅಣಕಿಸುತ್ತ-ಗೊಳ್ಳನೆ ನಗುತ್ತ ಲಿದೆ. ಅದೆಂಥ ಭಯೋತ್ಪಾದಕ ಹಾಸ್ಯ!

ನನ್ನ ಮೃದು ಮಧುರ ಭಾವನಾಕ್ರೀಡೆಯು-ನೆನಪಿನ ಕನಸು ಮುಗಿಯಿತು. ನನ್ನ ಆ ಅನಿರ್ವಚನೀಯಾನಂದಲೋಕದಿಂದ ಜಾರಿದೆನು. ನನ್ನ ನಿಜತ್ವವು ಇದಿರು ನಿಂತು ಕೋತಿಯಂತೆ ಹಲ್ಲು ಕಿರಿಯಲಾ ರಂಭಿಸಿತು.

ಬಿರುಗಾಳಿಗೆ ಸಿಕ್ಕ ಮೋಡಗಳಂತೆ ನನ್ನ ಮನಸ್ಸು ಚೆದರಿದೆ; ಪ್ರಶಾಂತವಾಗಿದ್ದ ಕಡಲಲ್ಲಿ ಬಿರುಗಾಳಿ ಯೆದ್ದಿದೆ.

ಕಷ್ಟಪಟ್ಟು—ಕಣ್ಣೀರೊರಸಿ ನನ್ನ ತಂಗಿಯ ನುಡಿಯೊಂದು ನೆನೆಯುತ್ತ ಮಲಗುತ್ತೇನೆ. ಬಿರುಗಾಳಿಯು ಹೊಡೆತ ಬಲವಾಗಿದೆ; ದೋಣಿಯ ಗತಿಯು ಅಂಬಿಗನ ಕೈ ಮೀರಿದೆ.

ಅಮ್ಮ ಮಗ್ಗುಲಲ್ಲೇ ಮಲಗಿದ್ದಾಳೆ. ಎಚ್ಚರಗೊಳಿಸುವುದು ಬೇಡ. ಗಾಳಿಗೆ ಹೋದುದರಿಂದ ಜ್ವರ ಹೆಚ್ಚಿದೆ. ಇನ್ನು-ಮಲಗಬೇಕು. ಇದೋ ನನ್ನ ತಂಗಿಯ ಹಾಡು.

" ಪ್ರೇಮವದು ಜೀವರಸ; ಜೀವನದು ಪ್ರೇಮಝರಿ।
ಪ್ರೇಮವದು ಗಳಿಗೆ ದೊರೆತಾನಂದ; ಮುಂದಿಲ್ಲ॥
ಪ್ರೇಮಿಸೋ—ಪ್ರೇಮವಿಲ್ಲದ ಜೀವ ಸಾವ ಸರಿ।
ಪ್ರೇಮಿಸೆಲೆ ಪ್ರೇಮಿಸೋ ಜೀವ ಜಡ ಭಾವ ವಿರಲು. " ॥

---

# ಸೌಂದರ್ಯಶಾಸ್ತ್ರ

## ರಮಣೀಯಾನುಭೂತಿ

Aesthetics:—ಇಂದ್ರಿಯ ಗೋಚರ ವಿಷಯಜ್ಞಾನ; ರಮಣೀಯ ರೂಪಧ್ಯಾನ ಸಮಾಧಿ; ವಿಷಯಗಳ ನಿರ್ಲಿಪ್ತಧ್ಯಾನದಿಂದುಂಟಾದ ಸುಖಸಂವೇದನಾ ಪ್ರಪಂಚ; ಧ್ಯಾನ—ನಿಷ್ಕಾಮಭೋಗ; ಮನೋಜನಿತ ವಿಷಯ ವ್ಯಾಪಾರವೂ ವಿಷಯ ವಿಷಯಕವೇ; ರಮಣೀಯಾನುಭೂತಿಯು ಶಾಂತಿ ಆನಂದಗಳಿಂದ ಕೂಡಿದ್ದಿರುವದು. ಉಳಿದ ಅನುಭವವು ಹಾಗಲ್ಲ. ಅವುಗಳಲ್ಲಿ ಕ್ಷೋಭ ಉಂಟಾಗುವದು. ಹೆಚ್ಚಾದರೆ ಇದರಲ್ಲಿ ಉರ್ಮಿಕಲಾಪವೇಳುವದು. ಅವುಗಳಲ್ಲಿ ಬೇರೊಂದು ಕಾಮನೆಯಿರುವದು. ಇದರಲ್ಲಿ ಇದೇ ಕೊನೆ ಮೊದಲು. ಅಸಹ್ಯವು ಅಸದ್ಭಾಳವೂ ರಮಣೀಯಾನುಭೂತಿಯಲ್ಲಿ ವ್ಯಂಜನ ಪದಾರ್ಥಗಳಂತೆ ರುಚಿಯುಂಟುಮಾಡುವದು; ಕ್ಲೇಶ ಹೇಸಿಗೆಗಳು ಉಂಟಾಗಲಾರವು. ಈ ಅನುಭೂತಿಯು ಉಳಿದವುಗಳಂತೆ ಸ್ಥೂಲವಲ್ಲ, ಸೂಕ್ಷ್ಮವು; ಸಂಕುಚಿತವಲ್ಲ ವಿಶಾಲವು. ರಮಣೀಯಾನುಭೂತಿಯು ಷಡ್ವಿಕಾರನಾಶಕವು. ಇದರಲ್ಲಿ ಸಾಕಾರಸಗುಣಭಕ್ತಿಯ ಆನಂದವಿರುವದು.

ಹೆಚ್ಚಿನ ತರಗತಿಯ ರಮಣೀಯಾನುಭೂತಿಯು ಆತ್ಮಾನಂದವೇ ಸರಿ; ಆತ್ಮಾನುಭವವೇ ಸರಿ. ರಮಣೀಯಾನುಭೂತಿಯು ಆತ್ಮಾನುಭೂತಿಯೇ; ಆದರೆ, ಎಲ್ಲರಿಗೂ ಒಂದೇ ಬಗೆಯ ಅನುಭವವುಂಟಾಗುವದೋ? ಇಲ್ಲ. ವ್ಯಕ್ತಿಗಳ ಪ್ರಕೃತಿ ಬೇರೆ ಬೇರೆ ಇರುವಂತೆ ಅನುಭವವು ಬೇರೆಬೇರೆಯಾಗುವದು. 'ಭಿನ್ನರುಚಿರ್ಹಿಲೋಕ:' ಇದು ಪ್ರತಿಯೊಬ್ಬರ ರುಚಿಯ ಮಾತಾಗಿದೆ. ಒಂದು ಯಾವಾಗಲೂ ಒಬ್ಬರಿಗೆ ಸೇರಸೇರುವದೋ? ಹಾಗೂ ಅಲ್ಲ. ಇದು ಆತ್ಮಾನಂದದ ಒಂದು ಪ್ರಕಾರವಾದ ವಿಷಯಾನಂದವು. ಇದು ಆತ್ಮನಂತೆ ದಿಕ್ಕಾಲಾದ್ಯನವಚ್ಛಿನ್ನವಿಲ್ಲ.

ರಮಣೀಯಾನುಭೂತಿಯ ಶಕ್ತಿಯು ಎಲ್ಲರಲ್ಲಿದ್ದರೂ, ಪ್ರಕೃತ ವ್ಯವಹಾರೋಪಯುಕ್ತವೆಂದು ಅಷ್ಟು ಕಂಡು ಬಾರದ್ದರಿಂದ, ಎಲ್ಲರಲ್ಲಿಯೂ ಅದು ಅಷ್ಟೇ ಅಂಶದಿಂದ ಬೆಳೆಯುವದಿಲ್ಲ. ಈ ಶಾಸ್ತ್ರವೂ ತೀವ್ರಸಿದ್ಧವಾಗುವದಿಲ್ಲ. ಈ ಶಾಸ್ತ್ರದ ಜ್ಞಾನವು ಅಸಿವಸಿಯಿಂದಾಗದು. ಈ ಶಾಸ್ತ್ರದಲ್ಲಿ ಅನೇಕ ತೊಡಕುಗಳುಂಟು. ಮೊದಲನೇ ತೊಡಕು "ಸೌಂದರ್ಯವು ದ್ರವ್ಯಗುಣವೋ? ದೃಷ್ಟಿಯ ಗುಣವೊ? ದ್ರುಷ್ಟನ ಗುಣವೋ?" ರಮಣೀಯತೆಯು ಅಂತಃಕರಣದ ವಿಷಯವು, ಬಹಿಷ್ಕರಣಗಳ ವಿಷಯವಲ್ಲ. ರೂಪವಾದಿಗಳು 'ಆಕಾರ'ಕ್ಕೆ ಮಹತ್ವ ಕೊಡುವರು ಭಾವವಾದಿಗಳು 'ಕಳೆ'ಗೆ 'ಚರ್ಮೆ'ಗೆ ಮಹತ್ವ ಕೊಡುವರು. ಕೆಲವರು ಪ್ರಮಾಣಬದ್ಧ ಪೂರ್ಣತ್ವಕ್ಕೆ ರಮಣೀಯವೆಂದೆನ್ನುವರು. ರಮಣೀಯತೆಯಲ್ಲಿ ಭಾವ, ಇಂದ್ರಿಯ, ದ್ರವ್ಯ, ಈ ಮೂರು ಪದಾರ್ಥಗಳ ಸಂಗಮವಿರುವದು.

ರಮಣೀಯತೆಯ ಅಂಗಗಳಿಗೆ ರಮಣೀಯತೆ ಯೆನ್ನುವದು ಕೇವಲ ತಪ್ಪು. ಭಾವ ಇಂದ್ರಿಯ ದ್ರವ್ಯಗಳ ಸೌಂದರ್ಯವನ್ನು ವಿಶೇಷವಾಗಿ ಪ್ರಕಟಮಾಡುವದೇ ರಮಣೀಯತೆಯು. ರುಚಿಯುಂಟಾಗಲಿಕ್ಕೆ ಲೋಕಾಂತವೇ ಬೇಕೊ, ಏಕಾಂತದಲ್ಲಿಯೂ ಆಗುವದೋ? ಎಂದೊಂದು ಕುತರ್ಕ. ರಮಣೀಯಾನುಭೂತಿಯ ಉಗಮವು ವ್ಯಕ್ತಿಯಲ್ಲಿಯೇ ಉಂಟು, ಅದರ ಸಂಗಮವು ಸಮಷ್ಟಿಯಲ್ಲಿ ಆಗಬಹುದು. ಮತ್ತೂ ಆಗಬೇಕು. ರಮಣೀಯಾನುಭೂತಿಗೆ ಕಣ್ಣು ಕಿವಿಗಳು ಹೆಚ್ಚು ಅನುಕೂಲವಿದ್ದರೂ, ಉಳಿದವುಗಳ ಉಪಯೋಗವೂ ಇಲ್ಲೆಂದಲ್ಲ.

Fine art affords keen and permanent delight to contemplation to arouse emotion. The instinct by which an artist (thus) prefers, selects and brings into light one order of facts or aspects in the thing before him rather than the rest is part of what is called the **idealising of ideal faculty**.

---

# ನಮಗೆ ಬೇಕಾದ ಕಾವ್ಯ

## ಓಂ ನಮೋನಾರಾಯಣಾಯ.

**ಅರಿವೆಂಬರವಿಯು ಮೂಡಲು ।**
**ಗುರುವೆಂಬಾತ್ಮಾರವಿಂದ ವರಳಿತು ನನ್ನೊಳ್ ॥**
**ಕರಮುಗಿದು ಶಿರವ ಬಾಗಿಸಿ ।**
**ಮೊರೆ ಹೊಗುವೆನು ಗುರುವಿಗರವಿಗಿಂದೂವುಂದೂ ॥**

[ರಸನೆ ಎಂದೆನಿಸಿಕೊಳ್ಳುವ ನಮ್ಮ ಸ್ಥೂಲದೇಹದೊಳಗಿನ ನಾಲಗೆಯು ಯಾವಾವ ರಸರಹಸ್ಯವನ್ನು ಹೇಳುವಳೊ ಅದನ್ನು ಮೊದಲು ನೋಡೋಣ. ರುಚಿ ವೈಚಿತ್ರ್ಯದ ರಹಸ್ಯವನ್ನರಿತು ಅದಕ್ಕೆ ರಸಿಕ ಉತ್ತರವನ್ನೀಯುವದೇ ನಮ್ಮ ರಸನೆಯ ಕಾರ್ಯ. 'ರಸೋ ವೈ ಸಃ' ಎಂಬ ಶ್ರುತಿಗೆ ಸಾಕ್ಷಿಯಾಗಿ ರುಚಿ ಪ್ರಪಂಚದಲ್ಲಿ ಸ್ಥಾಯಿಯಾಗಿ ರಸೋತ್ಪತ್ತಿಯು ಕಂಡುಬರುವದು. ನಾಲಗೆಯ ಲೌಕಿಕಕಾರ್ಯದಲ್ಲಿಯೂ ಒಂದು ಅಲೌಕಿಕ ತತ್ವವು ಹೊಳೆಯುತ್ತಿದೆ. ಕಹಿ ಯಿರಲಿ ಸಿಹಿ ಯಿರಲಿ; ಒಗರಿರಲಿ ಕಾರವಿರಲಿ; ಉಪ್ಪಿರಲಿ ಹುಳಿಯಿರಲಿ; ಒಂದೇ ಪ್ರಮಾಣದಲ್ಲಿಲ್ಲದಿದ್ದರೂ ಒಂದೇ ವಿಧವಾಗಿ ಈ ಎಲ್ಲ ಭಿನ್ನರುಚಿಗಳಿಗೆ ನಾಲಗೆಯು ನೀರು ಬಿಡು (ಕಡೆಯು)ವದರಲ್ಲಿಯೇ ರಸ ರಹಸ್ಯವು ಅಡಗಿಕೊಂಡಿದೆ. ಈ ಭಿನ್ನತ್ವದಲ್ಲಿಯ ಐಕ್ಯವೂ, ಈ ಐಕ್ಯದಲ್ಲಿಯ ಭೇಧವೂ "ಏಕಮೇವಾದ್ವಿತೀಯಂ"ದ ಲಕ್ಷಣವಾಗಿದೆ. ಈ ಅಲೌಕಿಕತೆಯನ್ನು ಕಂಡೇ ಕವಿಗೆ ಹಿಗ್ಗುಂಟಾಗುವದು. ಈ ರುಚಿಗಳಿಗೆ ನಾಲಗೆಯು ನೀರು ಬಿಡದಿದ್ದರೆಆ ಮನುಷ್ಯನು ರೋಗಿಯಾಗಲಿ ಯೋಗಿಯಾಗಲಿ ಇರಬೇಕೆಂದು ನಾವು ತಿಳಿದುಕೊಳ್ಳುವೆವು. ಪಾಕ ಪ್ರಪಂಚವೆಲ್ಲ ಈ ನೀರನ್ನು ಈ ರಸವನ್ನುಂಟುಮಾಡುವ ಕಾರ್ಯದಲ್ಲಿ ತೊಡಗಿದೆ. ಈ ರಸವು ಉಂಟಾಗದಿದ್ದರೆ ಉಂಡ ಅನ್ನವು ಅನ್ನವಾಗಿಯೇ ಉಳಿಯುವದು.-ವೀರ್ಯಶಕ್ತಿಯಾಗಲಾರದು. ಭಿನ್ನ-ಪರ

ಸ್ಪರವಿರುದ್ಧ-ರುಚಿ ದ್ರವ್ಯಗಳನ್ನೂ ಈ ರಸಯೋಗದಿಂದ ನಮ್ಮ ಚೈತ್ರ ನ್ಯಕ್ಕೆ ಸಹಕಾರಿಗಳಾಗುವಂತೆ ಮಾಡಬರುವದು. ಅನ್ನ ರಸನೆಯೂ ವಿರೋಧದಲ್ಲಿ ಐಕ್ಯವನ್ನುಂಟುಮಾಡಿ ತೃಪ್ತಿಕೊಡುವ ಅಲೌಕಿಕಕಾರ್ಯ ಮಾಡುವದು.

ಕಂಬನಿ, ತೊರೆಹಾಲು, ಬೆವರು, ರಕ್ತ, ವೀರ್ಯ ಮೊದಲಾದ ರಸ ಭೇದಗಳು ಬೇರೊಂದು ರಸನೆಯ ಪ್ರವಾಹಗಳಾಗಿವೆ. ಇಲ್ಲಿಯಾದರೂ ಸುಖದುಃಖದ ಭೇದವನ್ನತಿಕ್ರಮಿಸಿ, ಶೀತೋಷ್ಣದ ಕಟ್ಟನ್ನು ಅಲ್ಲಗಳೆದು, ಎಲ್ಲದರ ರುಚಿಯನ್ನುಂಡು ಒಂದು ವಿಧವಾದ ಹೆಚ್ಚಿನ ಸಮಾಧಾನ, ವನ್ನುಂಟುಮಾಡುವದೇ ಈ ಮನಃಪ್ರಾಣ ರಸನೆಗಳ ಕಾರ್ಯವಾಗಿದೆ.]

ಬಹುತರವಾಗಿ ಬಹಿರ್ವಿಷಯಗಳೊಡನೆಯೂ ಅಂತರ್ವಿಷಯಗಳೊಡ ನೆಯೂ ನಮ್ಮ ಸಂಬಂಧವು ರಾಗದ್ವೇಷಾತ್ಮಕವಿದೆ. ರಾಗದಿಂದ ಸುಖವೂ ದ್ವೇಷದಿಂದ ದುಃಖವೂ ಆಗುವದು. ಕವಿಯಿಂದಲೂ ಕವಿತೆ ಯಿಂದಲೂ ಇದೇ ಬಗೆಯ ಭೋಗವೇ ದೊರೆಯುತ್ತಿದ್ದರೆ, ಕಾವ್ಯ ವನ್ನಾರೂ ಅಷ್ಟು ಪ್ರೀತಿಸುತ್ತಿರಲಿಲ್ಲ. ರಾಗದ್ವೇಷಾತ್ಮಕ ದ್ವಿನೇತ್ರ ಗಳಿಂದ ನೋಡುವದೇ ವಾಡಿಕೆಯಾಗಿದೆ. ಕವಿಯು ತೃತೀಯನೇತ್ರದಿಂದ ನೋಡುವನು. ನೋಡಕಲಿಸುವನು. ಭೂತಕಾಲದಲ್ಲಿ ಜನರಿಗೆ ಜಗವು ರಾಗಮಯವಾಗಿತ್ತೆಂದೂ, ವರ್ತಮಾನ ಕಾಲದಲ್ಲಿ ಜನರಿಗೆ ಜಗವು ದ್ವೇಷ ಮಯವಾಗಿದೆಯೆಂದೂ ತಿಳಿದುಕೊಳ್ಳುವ ರೂಢಿಯೊಂದುಂಟು. ಭವಿಷ್ಯತ್ ಕಾಲದಲ್ಲಿ ಜನರಿಗೆ ಜಗವು ಆನಂದಮಯವಾಗಬೇಕೆಂದು ಕವಿಯು ಹವಣಿ ಸುತ್ತಿರುವನು. ಕವಿಯ ದೃಷ್ಟಿಯೂ, ದರ್ಶನವೂ, ವೃತ್ತಿಯೂ, ಭೋಗವೂ, ಎಲ್ಲವೂ ಅಲೌಕಿಕಗಳೆಂದು ಒಂದೇ ಮಾತಿನಲ್ಲಿ ಹೇಳಬಹುದು. ನಮ್ಮ ದೃಷ್ಟಿ ರಾಗದ್ವೇಷಮಯ; ಆವನದು ಪ್ರೇಮಮಯ. ನಮ್ಮ ದರ್ಶನ ಸುರೂಪಕುರೂಪಗಳಿಂದ ತುಂಬಿದ್ದು; ಆವನದು ಕೇವಲ ರಮಣೀಯ. ನಮ್ಮ ವೃತ್ತಿ ಕೆನ್ನೀರು ಕಂಬನಿಗಳನ್ನುಕ್ಕಿಸುವದು; ಆವನದು ರಸಾಸ್ವಾದನ

ಕುಶಲ. ನಮ್ಮ ಭೋಗ ಸುಖದುಃಖ ಪರಿಪೂರ್ಣ ; ಅವನದು ಅಮುಂದಾನಂದ ವುಳ್ಳದ್ದು. ಹೀಗಾಗಿ ಕವಿಯ ಇರುವಿಕೆಯೇ ಬೇರೆ. ನಮ್ಮಂತೆ ಇಹ ಲೌಕಿಕ, ಅಥವಾ ಪಾರಲೌಕಿಕವಲ್ಲ, ಅಲೌಕಿಕ.

' ಕಾವ್ಯಮಾನಂದಾಯ, ' ಹಾಡುಹಿಗ್ಗಿಗಾಗಿ? ಎಂದು ಪುರಾತನರು ಹೇಳಿರುವರು. ಸೋಪಾನಕ್ರಮದಿಂದ ಆನಂದ ವರ್ಧನ ಮಾಡುತ್ತ ಬ್ರಹ್ಮಾಸ್ವಾದ ಸದೃಶ ಆನಂದವನ್ನುಂಟುಮಾಡುವದೆ ಕಾವ್ಯದ ಲಕ್ಷಣ. ಈ ಆನಂದವು ರಸಾಸ್ವಾದದಿಂದಾಗುವದು. ಈ ರಸವು ಪ್ರೇಮದೃಷ್ಟಿಯಿಂದಲೂ, ರಮಣೀಯತಾದರ್ಶನದಿಂದಲೂ, ಪ್ರವಹಿಸುವದು. ಆನಂದ ರಸ, ಪ್ರೇಮ, ರಮಣೀಯತೆಗಳು ಕಾವ್ಯ ಬ್ರಹ್ಮನ ಚತುರ್ಮುಖಗಳಾಗಿವೆ. ಇದರಲ್ಲಿ ಆನಂದ ದೇವ, ರಸಜೀವ, ಪ್ರೇಮಭಾವ, ರಮಣೀಯತೆ ಜಗ. ಆನಂದದಲ್ಲಿಯೂ ತರಗತಿಗಳುಂಟು. ಶ್ರೀ ವಿದ್ಯಾರಣ್ಯರು ಪಂಚದಶಿಯಲ್ಲಿ ಆನಂದವನ್ನು ಪಂಚವಿಧವಾಗಿ ವಿಭಾಗಿಸಿರುವರು. ಎಲ್ಲಕ್ಕೂ ಕೆಳಗಿನದು ವಿಷಯಾನಂದ ; ಅದರ ಮೇಲಿನದು ವಿದ್ಯಾನಂದ ಅದಕ್ಕೂ ; ಮೇಲೆ ಅದ್ವೈತಾನಂದ ; ಆಮೇಲೆ ಆತ್ಮಾನಂದ ; ಎಲ್ಲಕ್ಕೂ ಮೇಲೆ ಯೋಗಾನಂದ. ಯೋಗಾನಂದವನ್ನುಂಟುಮಾಡುವ ಕಾವ್ಯ ಮೇಲು ವಿಷಯಾನಂದವನ್ನುಂಟುಮಾಡುವ ಕಾವ್ಯ ಕೀಳು. ಈ ವಿವೇಕವನ್ನು ನಾವು ಅವಶ್ಯವಾಗಿ ಮಾಡಲಿಕ್ಕೆ ಬೇಕು. ಕಂಡ ಕಂಡ ಕಾವ್ಯಗಳನ್ನು ಸಿಕ್ಕ ಸಿಕ್ಕಂತೆ ಹೊಗಳಬಾರದು.

ಒಂದು ಗುಣದೊಳನಂತಗುಣಗಳು ।
ಒಂದು ರೂಪದೊಳಿಹವು ಲೋಕಗ ।
ಳೊಂದೆ ರೂಪದಿ ಧರಿಸಿ ತದ್ಗತ ಪದಾರ್ಥದೊಳಹೊರಗೆ ॥
ಬಾಂದಳದ ಓಲಿದ್ದು ಬಹುಪೆಸ ।
ರಿಂದ ಕರೆಸುತ ಪೂರ್ಣಜ್ಞಾನಾ ।
ನಂದಮಯ ಪರಿ ಪರಿ ವಿಹಾರವ ಮಾಡಿ ಮಾಡಿಸುವ ॥ ೩. ೩೧

ಹರಿಕಥಾಮೃತಸಾರ.

ಎಂದು ಜಗನ್ನಾಥ ದಾಸರಾಯರು ಹೇಳುವ ನಿಸ್ತ್ರಗುಣ ಲೀಲಾ ಭಾವದಿಂದೊಡಗೂಡಿರುವ ಅನುಭಾವ-ಆನಂದ-ಸಮರಸಭಕ್ತಿಯಿಂದುಂಟಾದದ್ದೇ ಕಾವ್ಯ; ಉಳಿದದ್ದು ಕಾವ್ಯಾಭಾಸ. ಕಾವ್ಯವು ರಸಾತ್ಮಕವೆಂದು ಹೇಳುವರು; ಚಾರುತ್ವ ಪ್ರತೀತಿಯ ಚರ್ವಣದಿಂದ ರಸವುಂಟಾಗುವದೆಂದೂ ಹೇಳುವರು. ರಸದ ಸಾರವು ಚಮತ್ಕಾರವೆಂದು ಹೇಳುವರು. ಮತ್ತೆ, ಚಮತ್ಕಾರವು ಸಹೃದಯ ಹೃದಯ ಪ್ರಮಾಣಕವಾದ ಆನಂದ ವಿಶೇಷವೆಂದೂ ಹೇಳುವರು. ಅಂತೂ ಎಲ್ಲರೂ ಕಾವ್ಯವು ಆನಂದೋನ್ಮುಖವೆಂದು ಬಗೆಯುವರು. ರಸಗಳಲ್ಲಿ ಕರುಣವೇ ಮೌಲಿಕ ರಸವೆಂದು ಕೆಲವರು; 'ಶೃಂಗಾರ ಏವ ಮಧುರಃ ಪರಃ ಪಲ್ಹಾದನೋ ರಸಃ' ಎಂದು ಮತ್ತೆ ಕೆಲವರು; ಚಮತ್ಕಾರಮಯವಾದದ್ದರಿಂದ 'ಸರ್ವತ್ರಾಪ್ಯದ್ಭುತೋ ರಸಃ' ಎಂದು ಇನ್ನೊ ಕೆಲವರೂ;

ಆನುಕೂಲ್ಯೇ ಹರ್ಷಧೀಸ್ಸ್ಯಾತ್ಪ್ರಾತಿಕೂಲ್ಯೇ ತು ದುಃಖಧೀಃ ॥
ದ್ವಯಾಭಾವೇ ನಿಜಾನಂದೊ ನಿಜದುಃಖಂ ನ ತುಕ್ವಚಿತ್ ॥೧೩. ೭೩॥

**ಪಂಚದಶಿ.**

ಎಂದೆಂಬ ವಿರಕ್ತರು ಶಾಂತವೇ ರಸವೆಂದೂ ಹೇಳುವರು. ಎಲ್ಲರು ಆನಂದದಾಯಕ ಶಕ್ತಿಯ ಉತ್ಕರ್ಷಾಪಕರ್ಷಕ ಗುಣಪ್ರಮಾಣದಿಂದ ಕಾವ್ಯದ ರಸದ ನೆಲೆಬೆಲೆ ಗೊತ್ತುಮಾಡುವರು ಎಂದಂತಾಯಿತು.

ಆದರೆ, ಭಕ್ತಿಯು ರಸಗಳ ತಾಯಿಯೆಂದು ಹೇಳಬಹುದು. ಯಾಕೆಂದರೆ, ನಿರತಿಶಯ ಪ್ರೇಮಕ್ಕೆ ಆಸ್ಪದವನ್ನು ಕೊಡುವದೇ ಆನಂದವು; ಅಂಥ ಪ್ರೇಮ ಸ್ವರೂಪವೂ, ಶಾಂತ ಆನಂದ ರೂಪವೂ ಇದದ್ದೇ ಭಕ್ತಿಯು ಎಂದು ನಾರದರು ಹೇಳಿರುವರು. ಭಕ್ತನು ನಿಸ್ತ್ರಗುಣನು. ಪರಶಿವನ ಚಿತ್ ಶಕ್ತಿಯೇ ಅಂಗವನ್ನಾಶ್ರಯಿಸಿ ಭಕ್ತಿಯಾಯಿತೆಂದು ಶಿವಾದ್ವೈತಿಗಳು ಹೇಳುವರು. ಲಿಂಗದ ಶಕ್ತಿ ಅಂಗದಲ್ಲಿ ಭಕ್ತಿ. ಭಾವಕ ಭಗವಂತರ ಅಭಿನ್ನ

ವಾದ ಭಿನ್ನವೃತ್ತಿಯ ಲೀಲಾನಂದವೇ ಭಕ್ತಿಯೆಂದೆನಿಸಿಕೊಳ್ಳುವದು. 'ತ್ರೈಗುಣ್ಯೋದ್ಭವ ಮತ್ರಲೋಕಚರಿತಂ ನಾನಾರಸಂ ದೃಶ್ಯತೆ' ಎಂದು ಹೇಳಿದ ಕಾಲಿದಾಸನು ಗುಣಗಳಿಗೂ ರಸಕ್ಕೂ ಇರುವ ಸಂಬಂಧವನ್ನೇ ಆ ವಾಕ್ಯದಲ್ಲಿ ಸೂಚಿಸಿರುವನು. ನಾಟಕದಲ್ಲಿ ಲೋಕ ಚರಿತವನ್ನು ತೋರಿಸುವ ದರಿಂದಲೂ, ಬಹುಜನ ಸಮಾಜವೃತ್ತಿಯು ಸತ್ವ ರಜ ಸ್ತಮೋಮಯವಿರುವ ದರಿಂದಲೂ ಅವನಂದದ್ದು ಯೋಗ್ಯವೇ ಆಗಿದೆ. ಆದರೆ ದೃಶ್ಯ ಕಾವ್ಯದ ಈ ಬಂಧನವು ಶ್ರಾವ್ಯ ಕಾವ್ಯಕ್ಕೆ ನಿಗ್ರಹಿಸಲಾರದು. ಕಾವ್ಯ ವೃತ್ತಿಯು ಕಾಮಹತವಿಲ್ಲ; ಗುಣಭೂತವಿಲ್ಲ. ಸ್ವಚ್ಛಂದವೂ ಸ್ವಯಂಭುವೂ ಆದ ಆತ್ಮಪ್ರೀತಿ ಎಂಬ ಅಪರನಾಮವುಳ್ಳ ಭಕ್ತಿಯು ಕವಿಜೀವದ ಲಕ್ಷಣವಾಗಿದೆ. ಶೃಂಗಾರ ವೀರ ಕರುಣಾದಿಗಳಲ್ಲಿ ಈ ಭಕ್ತಿಯು ಎಷ್ಟು ಧ್ವನಿತವಾಗುವದೋ ಅಷ್ಟು ಆರಸಗಳು ಹೃದಯಂಗಮವಾಗುವವು. ಅಥವಾ ನಿಜವಾಗಿ ವಿಚಾರಿ ಸಿದರೆ, ಶೃಂಗಾರ ವೀರ ಕರುಣಾದಿ ನವರಸಗಳಲ್ಲಿ ಹೃದಯಂಗಮವಾದದ್ದು ಭಕ್ತಿವೃತ್ತಿಯ ಅಂಶವೆಂದೇ ಹೇಳಬಹುದು. ಕೇವಲ ಮೂಢ ಘೋರ ವೃತ್ತಿಗಳ ನಿದರ್ಶಕವಾದ ಕವಿತೆಯು ಕಾವ್ಯವಲ್ಲೆಂದು ಹೇಳಲು ಬೇಕು. ಚರ್ಮಚಕ್ಷುವಿಗೂ, ಮನೋಮಯ ಪುರುಷನಿಗೂ ಈ ಬಗೆಯ ಸಂಸಾರ ವನ್ನು ತೆರೆದು ತೋರಿಸಬೇಕಾಗಿಲ್ಲ; ಅದು ಪ್ರತ್ಯಕ್ಷವಾಗಿದೆ. ಕಾವ್ಯ ವ್ಯವಹಾರವೆಲ್ಲ ಮಹೋಲೋಕ ಜನೋಲೋಕಗಳ ಮಧ್ಯಮಾರ್ಗದ ಮೇಲೂ, ವಿಜ್ಞಾನಮಯ ಮತ್ತು ಆನಂದಮಯ ಪುರುಷರ ನಡುವೆಯೂ ನಡೆದಿರುತ್ತದೆ. ಮಾನವ ಲೋಕವೆಲ್ಲ ಹಸಿದು ನೀರಡಿಸಿರುವದು; ಅಲ್ಲಿಯ ಇಮ್ಮು ಮಮ್ಮಿಗಾಗಿ, ಆ ಸೋಮರಸಕ್ಕಾಗಿ, ಆ ಅಮೃತಕ್ಕಾಗಿ ವಿಕಾರ ಕಲುಷಿತ ಚಿತ್ತವೃತ್ತಿ ಪ್ರವಾಹದ ನೀರನ್ನು ಕುಡಿದು ಶ್ರಾಂತವೂ ಭ್ರಾಂತವೂ ಆದ ನರ ಲೋಕವು ಆ ಅಮೃತ ರಸವನ್ನು ಕುಡಿಯದೇ ತೃಪ್ತ ವಾಗದು.

ನಾಂತೋಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ॥೧೦. ೪೦ ಭ. ಗೀ. ಎಂದೂ, ಯದ್ಯದ್ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವವಾ।

ತತ್ತದೇವಾವ ಗಚ್ಛ ತ್ವಂ ಮಮ ತೇಜೋಂಶಸಂಭವಮ್ ‖೧೦. ೪೧ ಭ, ಗೀ.

ಎಂದು ಭಗವಂತನು ಹೇಳಿರುವನಷ್ಟೆ? ಶ್ರೀಯುಕ್ತವೂ ಊರ್ಜಿತವೂ ಆದ ದಿವ್ಯ ವಿಭೂತಿಯಲ್ಲದುದು ಕಾವ್ಯ ವಿಷಯವಾಗಲಾರದು ಎಂದು ಆದ್ಯರಿಂದ ಅದ್ಯತನ ಕವಿಗಳವರೆಗೆ ಎಲ್ಲರ ಅವಿಚ್ಛಿನ್ನ ಅನುಭವವಿದೆ. ಜಗತ್ತಿನೊಳಗಿನ ಎಲ್ಲ ಮಹಾ ಕಾವ್ಯಗಳು ಭಗವಂತನ ಅಥವಾ ಅವನ ತೇಜೋಂಶದ ಕೀರ್ತನೆಗಳಾಗಿವೆ. ಈ ಮಾತು ಮನಗಂಡಮೇಲೆ ಭಕ್ತಿಯು ರಸಗಳ ತಾಯಿಯೆಂಬ ಮಾತು ಮನದಟ್ಟಾಗುವದು.

ಚೇತನಾಚೇತನವಿಲಕ್ಷಣ ।
ನೂತನ ಪದಾರ್ಥಗಳೊಳಗೆಬಲು ।
ನೂತನತಿ ಸುಂದರತೆ ಸುಂದರ ರಸತೆ ರಸ ರೂಪಾ ‖
ಜಾತರೂಪೋದರ ಭವಾದ್ಯರೋ ।
ಳಾತತಪ್ರತಿಮಪ್ರಭಾವ ಧ ।
ರಾತಳದೊಳಿನ್ನೊಡನೆಯಾಡುತಲಿಪ್ಪ ನಮ್ಮಪ್ಪ ‖೨೦.೨೩ ಹ. ಕ. ಸಾ.

ಜಗನ್ನಾಥ ದಾಸರಾಯರು.

ಇಂಥ ಅಲೌಕಿಕ ಪ್ರತೀತಿಯ ಚಿತೋಹಾರಿವಚನಗಳು ಭಕ್ತಿಯಿಂದ ಅಭಿನ್ನವಾದ ರಸದ ನಿವೃತ್ತಿ-ದ್ರುತಿ-ವಿಶ್ರಾಂತಿ ಲಕ್ಷಣವನ್ನು ಸಾರುವದಿಲ್ಲವೇ? ವಿಭೂತಿಯಲ್ಲದುದು ಸ್ತೋತ್ರಾರ್ಹವೇ? ಶ್ರೀಮತ್ತಲ್ಲದುದು ದರ್ಶನೀಯವೇ? ಊರ್ಜಿತವಲ್ಲದುದು ಕೀರ್ತನೀಯವೇ? 'ನಾನೃಷಿಃ ಕುರುತೆ ಕಾವ್ಯಂ' ಋಷಿಯಲ್ಲದವನು ಕವಿಯಲ್ಲ. ಆರ್ಷಚಕ್ಷುವಿನಿಂದಲ್ಲದೆ ಕವಿಗಳು ಕ್ರಾಂತದರ್ಶಿಗಳಾಗಬಲ್ಲರೇ? ಪುರುಷೋತ್ತಮನ ಅಂಶಗಳಾದ ಜೀವಜಗತ್ತಿನೊಳಗಿನ ದಿವ್ಯ ವಿಭೂತಿಯನ್ನು ನೋಡಬಲ್ಲರೇ? ತೋರಬಲ್ಲರೇ? ಲೋಕಾತಿಕ್ರಾಂತ ಗೋಚರವಚಸ್ಸುಳ್ಳವರಾಗಬಲ್ಲರೇ? ತಮ್ಮ ಪ್ರೇಮ ಭಾವ ಯೋಗದಿಂದ, ರಮಣೀಯಗಳಾದ ದಿವ್ಯ ವಿಭೂತಿಗಳ ಕುರುಹುಗಳ ಮುಖಾಂತರವಾಗಿ, ಜೀವಿಗಳಿಗೆ, ಪುರುಷೋತ್ತಮನ ಲೀಲಾಮೃತವನ್ನುಣಿಸಿ ಪರಮಾನಂದವನ್ನುಂಟುಮಾಡುವವರೇ-ಕವಿಗಳು.

ವಿಭೂತಿಯ ದಿವ್ಯದರ್ಶನದಿಂದ ವಿಸ್ಮಯವು, ವಿಭೂತಿಯ ಅದರ್ಶನದಿಂದ ಜುಗುಪ್ಸೆಯು, ವಿಭೂತಿಯ ಕರಾಳದರ್ಶನದಿಂದ ಭಯವು, ವಿಭೂತಿಯ ವಿಚಿತ್ರ ದರ್ಶನದಿಂದ ಹಾಸವೂ, ವಿಭೂತಿಯ ಸಾಪೇಕ್ಷ ದರ್ಶನದಿಂದ ರತಿಯೂ, ವಿಭೂತಿಯ ವೈರೋಧಿಕ ದರ್ಶನದಿಂದ ಕ್ರೋಧವೂ, ವಿಭೂತಿಯ ಅನುಕೂಲದರ್ಶನದಿಂದ ಉತ್ಸಾಹವು, ವಿಭೂತಿಯ ಸ್ವಸ್ಥ ದರ್ಶನದಿಂದ ಶಾಂತಿಯು, ವಿಭೂತಿಯ ವಿರಹದರ್ಶನದಿಂದ ಶೋಕವೂ ಉಂಟಾಗುವವು. ಇಲ್ಲಿ ಶ್ರಿಯೂ ಊರ್ಜಿಸ್ವಿತೆಯೂ ವಿಭೂತಿಯಲ್ಲಿಯೇ ಗರ್ಭಿತವಾಗಿವೆ. ಪುರುಷೋತ್ತಮನ ದಿವ್ಯ ವಿಭೂತಿಗಳಿಗೂ ಅಂತವಿಲ್ಲ. ಅಂತೆಯೇ ಅವನನ್ನು ಕೀರ್ತಿಸುವ ಕಾವ್ಯಗಳಿಗೂ ಅಂತವಿಲ್ಲ. ಕ್ಷಣಕ್ಷಣಕ್ಕೂ ರಮ್ಯರೂಪಗಳನ್ನು ತೋರಿಸುವ ಪುರುಷೋತ್ತಮನ ಲಕ್ಷ್ಮೀ ಮತ್ತು ನವನವೋನ್ಮೇಷಶಾಲಿನಿ ಪ್ರಜ್ಞೆಯಾದ ಪ್ರತಿಭೆ ಇವರಿಬ್ಬರ ಸಂಗಮದಿಂದ ಅಖಂಡೈತರ ಸಾತ್ಮಕವಾದ ಆನಂದವು ಆಗುತ್ತಿರಲು ಅನಂತವಾಗಿ ಭೋಗಿಸುತ್ತಿರುವದು ಯಾವ ಜೀವಕ್ಕೆ ಬೇಡಾದೀತು ? ವರ್ಣಕಕಾವ್ಯಗಳಲ್ಲಿ ವಸ್ತುಜಾತದೊಳಗಿನ ತೇಜೋಂಶವನ್ನೂ, ವಸ್ತುಕಕಾವ್ಯಗಳಲ್ಲಿ ಶೀಲ-ಕಾರ್ಯಗಳೊಳಗಿನ ಊರ್ಜಿತ ತತ್ವವನ್ನೂ ಭಾವಗೀತಿಗಳಲ್ಲಿ ವಿರಾಟ ಪುರುಷನ ಅಂತಃಕರಣದೊಳಗಿನ ಶ್ರೀಮತ್ತಾದ ವಿಭೂತಿಯು ತಸತ್ವವನ್ನೂ ಕವಿಯು ಆಸ್ವಾದಾನುಕೂಲವನ್ನಾಗಿ ಮಾಡುವನು. ಭವಸಾಗರವನ್ನು ಮಂಥನಮಾಡಿ ರಸಾಮೃತವನ್ನು ಹೊರೆದೆಗೆಯುವದೇ ಕವಿಯ ದೇವಕಾರ್ಯ.

ಇನ್ನು ರಸಾವತಾರದ ವಿಷಯವಾಗಿ ಸ್ವಲ್ಪ ವಿಚಾರಮಾಡುವಾ. ಸಂಸಾರವು ಲೀಲಾಮಯವೆಂದು ಭಾವಿಸಿ ಭೋಗ ಹೊಂದುವ ಯೋಗಿಯೇ ರಸಿಕ ಶಿಖಾಮಣಿಯು. ಈ ಯೋಗದ ಅಂಶಿಕರೇ ಸಹೃದಯರು. ಎಲ್ಲ ಸಹೃದಯರಲ್ಲಿಯೂ ರಸಾಸ್ವಾದನಶಕ್ತಿಯು ವಾಸನಾರೂಪದಿಂದ ಅಂದರೆ ಗರ್ಭಿತಜ್ಞಾನರೂಪದಿಂದ ಸೂಕ್ಷ್ಮವಾಗಿರುವದು. ಇದೇ ಸ್ಥಾಯೀ

ಸಂಚಾರಿ ಭಾವಗಳ ಮನೆಯು. ವ್ಯಕ್ತಾವ್ಯಕ್ತ ಸಂಸಾರದ ವೈರೂಪ್ಯವೂ ಕಾಠಿಣ್ಯವೂ ಆಭಾಸಿಕವಾಗಿದೆ. ಅದರ ನಿಜಸ್ವರೂಪವು ರಸಮಯ ವಾಗಿದೆ. ಇದೇ ವಿಭಾವಗಳ ಬೀಡು. ಸಾಮಾನ್ಯವಾಗಿ ಮರಣೋನ್ಮುಖನ ನಿರ್ದ್ರವ ಬಾಯೊಳಗಿನ ಕಲ್ಲು ಸಕ್ಕರೆಯ ಹರಳಿನಂತೆ ಜೀವ ಜಗತ್ತಿನ ಸಂಯೋಗವು ಇರುತ್ತದೆ. ಕವಿಯು ತನ್ನ ಮಂತ್ರವಾಣಿಯಿಂದ ಜೀವ ಜಗತ್ತುಗಳ ಆಭಾಸಿಕ ಕಾಠಿಣ್ಯವನ್ನು ಬಯಲಿಗೆ ಮಾಡಿ ರಸಕ್ಕೆ ರಸ ಕೂಡಿಸಿ ಸವಾರಸ್ಯವನ್ನುಂಟುಮಾಡಿ ಸಚ್ಚಿದಾನಂದ ಸದೃಶ ಅನುಭೂತಿ ಯನ್ನು ಕೊಡುವನೆಂದು ಅಭಿನವ ಗುಪ್ತಾಚಾರ್ಯರ ಮತವಿದೆ. ಶ್ರೀ ರವೀಂದ್ರನಾಥರಾದರೂ 'Personality' ೧ಳ ಪುಟದಲ್ಲಿ ಇದೇ ಮತ ವನ್ನೇ ಪುಷ್ಟೀಕರಿಸಿ, ರಸಕ್ಕೆ emotional activity ಎಂದೆನ್ನು ವರು "outer juices having their response in the inner juices of our emotion." ಇದರ ಕಾರ್ಯವೇನೆಂದರೆ: "It brings to us ideas vitalized by feelings ready to be made into the life stuff of our nature" ನಮ್ಮ ರಸನೆಯು ಮಾಡುವ ಕಾರ್ಯವನ್ನು ನಾವು ಸೂಕ್ಷ್ಮವಾಗಿ ನೋಡಿದರ ರಸ ರಹಸ್ಯದಲ್ಲಿ ನಮಗೊಂದಿಷ್ಟು ಪ್ರವೇಶ ದೊರೆಯುವಂತಿದೆ.

ಕಲ್ಲು ಸಕ್ಕರೆಯೊಳಗಿನ ದ್ರವಕ್ಕೆ ಪ್ರತಿ ಉತ್ತರವಾಗಿ ರಸನೆಯೊಳ ಗಿನ ಲಾಲಾರಸವು ಹೊರಹೊಮ್ಮಿ ಅದರೊಡನೆ ಬಂದಾಗಿ ಅನ್ನವನ್ನು ರಕ್ತ ವೀರ್ಯ ಮುಖವಾಗಿ ಪ್ರಾಣಶಕ್ತಿಯನ್ನಾಗಿ ಮಾಡುವದು. ರಸ ನೆಯು ಲಾಲಾರಸದ್ರವ ಹೀನವಾಗಿದ್ದರೆ ಅಂದರೆ ರಸನೆಯು ಅರಸಿಕ ವಾಗಿದ್ದರೆ ಕಲ್ಲುಸಕ್ಕರೆಯೊಳಗಿನ ರಸಾಸ್ವಾದವು ಸಿಗಲಾರದು. ಈ ಅರಸಿಕತೆಯು ಅನಾರೋಗ್ಯದ ಲಕ್ಷಣವು. ನಮ್ಮ ಜೀವದ ವಿಷಯ ವಾದರೂ ಹೀಗೇ. ಜೀವವು ರಸಮಯವು ; ಜಗ ರಸಮಯವೂ ಅವುಗಳ ಐಕ್ಯವು ಸಾಮರಸ್ಯವು. ಆ ರಸವೇ ಬ್ರಹ್ಮ.

ಬ್ರಹ್ಮವಿತ್ ಪರಮಾಪ್ನೋತಿ ಶೋಕಂ ತರತಿ ಚಾತ್ಮವಿತ್ ॥
ರಸೋ ಬ್ರಹ್ಮರಸಂ ಲಬ್ಧ್ವಾನಂದೀಭವತಿ ನಾನ್ಯಥಾ ॥೧೧. ೨ ಪಂಚದಶಿ.

ಈ ರಸದ ಅಜ್ಞಾನವೇ ಬದ್ಧತೆ; ಅದೇ ಅಂಧಂತಮಸ್ಸಿನ ಅಸೂರ್ಯ ಲೋಕ. ಶ್ರೀಮದ್ವಾಲ್ಮೀಕಿ ಋಷಿಗಳು "ಯೋಗಮಾಸ್ಥಾಯ" ಯದೃಷ್ಟಿಯಿಂದಲೇ ಛಂದೋಮಯವಾಣಿಯಿಂದ ರಾಮಾಯಣಕ್ಕೆ ಮೊದಲು ಮಾಡಿದರಂತೆ. ಕವಿಯು ಲೋಕೋತ್ತರವಾದ ಕರ್ಮವೇ ಕಾವ್ಯವಾದುದರಿಂದ; ಕಾವ್ಯ ಪ್ರಾರಂಭದಾದಿಯಲ್ಲಿ ನರನು ಕವಿಯಿರಬೇಕು. ಯೋಗಾತ್ಮನಿರಬೇಕು. ಮಹಸ್ಸಿನಲ್ಲಿ ಪ್ರತಿಷ್ಠೆ ಹೊಂದಿದ, ಶ್ರದ್ಧೆಯೇ ಶಿರವಾದ, ಋತ ಸತ್ಯಗಳೇ ಪಕ್ಷಗಳಾದ, ವಿಜ್ಞಾನಮಯ ಪುರುಷನಾಗಬೇಕು. ಈ ಪುರುಷನ ಭಗೀರಥ ತಪಸ್ಸಿನಿಂದ ಆನಂದಾತ್ಮನಾದ, ಪ್ರಿಯವೇ ಶಿರವಾದ, ಮೋದ ಪ್ರಮೋದಗಳೇ ಪಕ್ಷಗಳಾದ, ಬ್ರಹ್ಮದಲ್ಲಿ ಪ್ರತಿಷ್ಠೆ ಹೊಂದಿದ, ರಸಪುರುಷನು, ದೇವತೆಗಳ ಅನ್ನಪಾನನಾದ ಸುಧಾಂಶುವು. ಆಸೋಮನು, ಗಂಗೆಯಂತೆ ಭೂಲೋಕಕ್ಕೆ ಅವತರಿಸುವನು. ಈ ಕಾಲಕ್ಕೇ ಮಂತ್ರಗಳು ಉದಯಿಸುವವು. ಮಂತ್ರವಾಹನನಾದ ರಸಪುರುಷನು ಅವತರಿಸುವನು. ಇಂಥ ಕಾವ್ಯವು ಕಿಂಚಿನ್ಮಾತ್ರ ಎಲ್ಲಿಯಾದರೂ ಅವತರಿಸಿದರೆ ಆ ಭೂಮಿಯನ್ನೂ ಆ ಕಾಲವನ್ನೂ ಧನ್ಯಮಾಡಿ ಬಿಡುವದು. ಆ ಸಾರಸ್ವತವೂ ಉದ್ಧಾರವಾಗುವದು.

ಜಗನ್ನಾಥ ದಾಸಾರ್ಯರು ಇಂಥ ಸಾರಸ್ವತವನ್ನನು ಲಕ್ಷಿಸಿಯೇ ಹೀಗೆ ಹೇಳಿರುವರು.

ಶ್ರುತಿ ಪುರಾಣ ಸಮೂಹದೊಳು ಭಾ ।
ರತಪ್ರತಿ ಪ್ರತಿಪದಗಳೊಳು ನಿ ।
ರ್ಜಿತನ ಗುಣರೂಪುಗಳ ಪುಡುಕುತ ಪರಮಹರುಷದಲಿ ॥
ಮತಿಮತರು ಪ್ರತಿದಿವಸ ಸಾರ ।
ಸ್ವತ ಸಮುದ್ರದಿ ಶಫರಿಯಂದದಿ ।
ಸತತ ಸಂಚರಿಸುವರು ಕಾಣುವ ಲವಲವಿಕೆಯಿಂದ ॥

ನಮಗೆ ಈಗ ಬೇಕಾದವರು ಅಷ್ಟಾದಶ ವರ್ಣನದ, ಚಕೋರ ಚಾತಕಗಳ ಸಮಯದ ಕವಿಗಳಲ್ಲ ; ಸೃಷ್ಟಿಯ ಪೂಜಾರಿಗಳಾದ, ವಿಚಾರ ಮೂಷ ವಿಕಾರಗಳನ್ನು ತಾಲಲಯಕ್ಕೆ ಹಾಡುವ ಕವಿಗಳಲ್ಲ. ನಮಗೆ ಬೇಕಾದವರು ಋಷಿಗಳು. ಮಂತ್ರ ದೃಷ್ಟರಾದ ಋಷಿಗಳು. ವೇದದ ಕವಿಗಳು. ಕನ್ನಡ ಸಾಹಿತ್ಯದಲ್ಲಿ ದಾಸಕೂಟದವರೂ, ವಚನಕಾರರೂ ಪ್ರಾರಂಭದ ಪ್ರಯತ್ನವನ್ನು ಮಾಡಿರುವರು. ಅವರ ಹಾದಿಯನ್ನು ನಾವು ಹಿಡಿಯಬೇಕು.

ಶಿವಶಿವಪುಣ್ಯಬಂಧುವೆ, ಪುರಾತನಬಂಧುವೆ, ಸರ್ವಜೀವಬಂ ।
ಧುವೆ, ಪರಮಾರ್ಥಬಂಧುವೆ, ಸುಖಪ್ರದಬಂಧುವೆ, ಬಾರನಾಥಬಂ ॥
ಧುವೆ, ಯನಿಮಿತ್ತ ಬಂಧುವೆ, ಮನೋಹರಬಂಧುವೆ, ಅತ್ಯಪೂರ್ವಭಂ ।
ಧುವೆ ಸಕಲೈಕಬಂಧುವೆ, ಯನಾರತಬಂಧುವೆ ಹಂಪೆಯಾಳ್ದನೇ ॥೯೧॥ ಹರಿಹರ.
ಪಂಪಾಶತಕ.

ಈ ಸಥಿಯ, ಈ ಸಲಗೆಯ ಈ ಅಂತಃಕರಣದ, ಈ ಅಪೇಕ್ಷದ, ಈ ಅಧಿಕಾರದ ಕವಿತೆ ನಮಗೆ ಬೇಕು. ಮೊದಲು ಭಾವಯೋಗ ಬಲದಿಂದ ಅಪರೋಕ್ಷ ಜ್ಞಾನವನ್ನೂ, ಶೋಕನಿವೃತ್ತಿಯನ್ನೂ, ನಿರಂಕುಶ ವೃತ್ತಿಯನ್ನೂ ಪಡೆದ ಪ್ರಾಸಾದಿಕ ಕವಿಗಳು ಬೇಕು.

ಎನ್ನ ಸರ್ವಾಂಗವನು । ಎನ್ನ ಪರಿಣಾಮಕ್ಕೆ ॥
ಚನ್ನಾಗಿ ಸಲಿಸುವೆನು ಎಲೆ ಲಿಂಗವೇ ॥ ಪಲ್ಲ ॥

ಎನ್ನ ಹೃದಯವು ನಿಮಗೆ । ಯುನ್ನತದ ಮನೆಯಯ್ಯ ॥
ಎನ್ನ ಮುಖ ಮುಖಶಾಲೆ ನಿಮಗಪ್ಪುದೋ ॥
ಎನ್ನ ನವ ಚಕ್ರಗಳು । ಬಿನ್ನಣದ ನವನೆಲೆಯು ॥
ಹೊನ್ನ ಪುಪ್ಪರಿಗೆಯಾಗಿಪ್ಪುದಯ್ಯಾ ॥೧॥

ಎನ್ನ ಹೃತ್ಕಮಲವದು । ರನ್ನ ಖಚಿತಗಳಪ್ಪ ॥
ನಿನ್ನ ಶಯನಕೆ ಮಂಚವಾಗಿರ್ಪುದು ॥

ಎನ್ನಜ್ಞಾನವು ನಿಮಗೆ । ಉನ್ನತದ ತಲೆಗಿಂಬು ॥
ಯನ್ನಯಾಚಾರವೇ ಚರಣಭಟನೂ ॥೨॥

ಎನ್ನ ಶ್ರೋತ್ರವು ನಿಮ್ಮ । ಸನ್ನುತದ ನುಡಿಗಳನು ॥
ಭಿನ್ನವಿಲ್ಲದೆ ಕೇಳ್ವದಾಸಿ ನಿಮಗೇ ॥
ಎನ್ನ ಕೋರಿಕೆ ಚಲುವ । ನಿನ್ನ ಚರಣವ ತೊಳೆವ ।
ಮನ್ನಣೆಯ ತೊತ್ತು ಆಗಿರ್ಪುದಯ್ಯಾ ॥ ೩ ॥

ಎನ್ನ ನಯನವು ನಿಮಗೆ । ರನ್ನವೆಳಗಿನ ಹಣತಿ ॥
ಎನ್ನ ಘ್ರಾಣವು ನಿಮಗೆ । ಧೃಡಭರಣಿಯೂ ॥
ಎನ್ನ ಜಿಹ್ವೆಯು ನಿಮಗೆ । ಮನ್ನಣಡ ತಾಂಬೂಲ ॥
ಹೊನ್ನಡುಗವುದಾಗಿ ಮೆರೆದಿರ್ಪುದು । ೪ ॥

ಎನ್ನ ಕೈಗಳು ಎರಡು । ನಿನ್ನ ಪಾದವನೊಲಿದು ॥
ಚನ್ನಾಗಿ ತೊಳೆಯುವಾ ಹೆಂಗಳಯ್ಯಾ ॥
ಎನ್ನ ಕಾಲುಗಳೆರಡು । ನಿನ್ನ ಮಜ್ಜನಗಳಿಗೆ ॥
ಪನ್ನೀರುಗಳ ತರುವ ತೊತ್ತಿರಯ್ಯಾ ॥ ೫ ॥

ಎನ್ನ ಪ್ರಾಣವು ಇದುವೆ । ನಿನ್ನ ರತಿಸುಖಗಳಿಗೆ ॥
ಭಿನ್ನವಿಲ್ಲದೆ ಯಿಪ್ಪ ಸತಿಯು ಬಳಿಕಾ ॥
ಎನ್ನಮನವದು ಬಿಡದೆ । ಎನ್ನ ನಿನ್ನನು ತಂದು ।
ಚನ್ನಾಗಿ ಒಂದು ಗೂಡಿಪ ಕೆಳದಿಯೂ ॥೬॥

ಇಂತು ಸರ್ವಾಂಗವನು । ಮುಂತೆನ್ನ ಪ್ರಾಣವನು ॥
ಸುತತಂ ಮಿಗೆತಾನು ಕೈ ಕೊಳುತಿರೇ ॥
ಭ್ರಾಂತಿಭ್ರಮೆಯುಳಿಯುತ್ತ । ಚಿಂತೆಯಿನ್ನೇಕಯ್ಯ ॥
ಕಂತು ಹರಶಿವಷಡಕ್ಷರಿ ಲಿಂಗವೇ ॥೭॥ ೪೬.

ಮುಪ್ಪಿನ ಷಡಕ್ಷರಿ ವಚನ.

ಹೀಗೆ ಹಾಡಲಾಪ ಸರ್ವ ಸಮರ್ಪಣದ ಸೇವಾಭಕ್ತಿಯ ಕವಿಗಳೂ,

ಅರಿತವರಿ ಗತಿ ಸುಲಭ ಹರಿಯ ಪೂಜೆ ॥
ಅರಿಯದವನಿಭಾರ್ಗ್ಯತರ ಲೋಕದೊಳಗೇ ॥ಪಲ್ಲ

ಎಂದು ಜಗನ್ನಾಥ ದಾಸಾರ್ಯರಂತೆ ಹಾಡಲಾಪ ಅರ್ಚನ ಭಕ್ತಿಯ ಕವಿಗಳೂ,

ಕಂಗಳೆ ಕಳೆ, ಮನದ ನೋಟ, ಮಸಕದ ಮಿಂಚಿನ ಗೊಂಚಲು ಸೂಸಿದಂತೆ, ತಾರಕಿ ತಳಿದಂತೆ, ಅರಳಿದ ಬಳ್ಳಿ ಹಬ್ಬಿದಂತೆ, ಅಲ್ಲದಿರೆ ಕೊರೆ ಕೆಂಪು ತಿದ್ದುವ ಆಳುಗಳಿನ್ನಾರನು ಕಾಣೆ ಐದು ರೂಹಸೊಂದು ಮಾಡಿ, ಕಾದಿಗೆಲಿದು ಸೋತು ಹೊರಹೊಂಟು ಹೋದ ನವ್ವ. ಮಹಾಲಿಂಗ ಗಜೇಶ್ವ ಕಂಗಳ ಕಾಳಗದ ಮಾಸಾಳು.

ಇಂಥ ಸಾಯುಜ್ಯೋನ್ಮುಖರತಿಯ ಮಾತಿನ ಕವಿತೆಬೇಕು.

ಕೋಕೀಲೇ। ಜಾಣ ಕೋಕೀಲೇ ಮುದ್ದು ಕೋಕೀಲೇ। ಚೆಲ್ವಕೋಕೀಲೇ॥
ಅಂದು ತಪದೊಳೀಶ ನೊಂದಿರತಿರ ಲೆಚ್ಚು। ಬೆಂದಕಾಮನಬಿಟ್ಟು ಕೋಕೀಲೇ॥
ಚಂದದಿಂದಲಿ ಬಾಲೇಂದು ಧರನಕೂಡಿ। ಕುಂದದೆ ನೀ ಬಾಳುಕೋಕೀಲೇ ॥೧॥

ಶಿವಯೋಗಿಗಳ ನಿಜಗುಣಿಗಳ ಇಂಥ ಆತ್ಮನು ಆತ್ಮನಿಗೆ ಅಂದ ಆತ್ಮಗತದಂಥ ಕವಿತೆ.

ಜಳದೊಳಗೆಲ್ಲ ನೋಡು ಪೊಡೆಸತ್ಯಮೆ ತೀವಿತುಳುಂಕುತಿರ್ಪುದೈ।
ಬಗೆಪೊಡೆ ಭಕ್ತನೊರ್ವನದರೊಳ್ ನೆರೆ ಸತ್ಯಮನಾಡಲಾತನೇ ॥
ಪಗೆಯೆನಿಸಿದಿರ್ಪುದೇ ಕೆಲ ? ಅಸತ್ಯಮೆತಾಂ ಪಿರಿದಾಗೆಯುಂತದಂ।
ಬಗೆಯದೆ ಸತ್ಯಮಂ ನುಡಿಯುತರ್ಚಿಸುತಿರ್ಪುದು ಹಂಪೆಯಾಳ್ದನಂ

॥೯೩. ಪ ವಾ. ಶ. ಹರಿಹರ.

ಇಂಥ ಪ್ರತೀತಿಯ, ಇಂಥ ಪ್ರತಿಜ್ಞೆಯ ಕವಿತೆ ಬೇಕು.

ಆದರೆ ಇಷ್ಟರಿಂದೇ ಸಾಗದು! ಮತಗಳ ಜೇಲಿಯನ್ನು ದಾಟಿ, "ಎಲ್ಲರೊಳು ತಾನಿಪ್ಪ ತನ್ನೊಳಗೆಲ್ಲರನು ಧರಿಸಿಹ" ಒಂದು ಸನಾತನ ಧರ್ಮದ ಅನುಭಾವ ಸ್ಫೂರ್ತಿಯಿಂದ 'ಏಕಂ ಸದ್ವಿಪ್ರಾಬಹುಧಾ ವದಂತಿ'

'ಸರ್ವಂಚಿತ್ಜ್ಯೋತಿ ದೇವೇತಿ ಯಃಪಶ್ಯತಿ ಸಪಶ್ಯತಿ' 'Nature is a symbol' ಮೊದಲಾದ ಯೋಗಿಪ್ರತ್ಯಕ್ಷ ಜ ಪ್ರತೀತಿಯ ಸಮಯುಗಳಿಂದ (ಶಾಸ್ತ್ರೀಯ ಸಮಯುಗಳಿಂದಲ್ಲ) ಒಡಗೂಡಿದ, ಗಾಢ, ಉನ್ನತ, ಕಾವ್ಯವು ಬೇಕು.

* ಅಂದಚಂದದ ನೀಟುಗಾರಿಕೆಯ ಕಾವ್ಯವು ನಮಗಷ್ಟು ಬೇಕಾಗಿಲ್ಲ ; ಜೀವಿತದ ಹುರುಳು ತಿರುಳನ್ನು ಒಡಮಡಿದು ತೋರಿಸಿ ಸಂಸಾರ ಸಾರೋದಯವಾಗುವ ಕಾವ್ಯವು ನಮಗೆ ಬೇಕಾಗಿದ್ದರೂ, ನರನೊಳಗಿನ ನಾರಾಯಣನ ಅವತಾರದ ಬೆಲೆಗಳನ್ನೂ, ಮಾನವನೊಳಗಿ ಮನುವಿನ ಉದ್ಧಾರದ ನೆಲೆಗಳನ್ನೂ ಪ್ರಾತಿಭ ಚಕ್ಷುವಿನ ಜ್ಯೋತಿಯ ಬೆಳಕಿನಲ್ಲಿ ಜಗತ್ತಿನ ರಸಿಕ ದೃಷ್ಟಿಗೆ ತೋರಿಸುವ, ಶ್ರವಣಮಾತ್ರದಿಂದ ಸಹೃದಯರ ಹೃದಯದಲ್ಲಿ ವಿದ್ಯುದ್ದೀಪಗಳ ಕಾರ್ತಿಕವನ್ನು ಹಚ್ಚಿದಂತೆ ಮಾಡುವ ಮಂತ್ರ ಜಲವನ್ನು ಕಿವಿಯಿಂದೀಂಟಿಸುವ ಕಾವ್ಯ ನಮಗೆ ಬೇಕಾದ ಕಾವ್ಯ ! ವೆಂದು ಗುರು ಅರವಿಂದರು 'Future Poetry' ಯಲ್ಲಿ ಹೇಳಿರುವರು. ವಸ್ತು ವಸ್ತುವಿನ ಅಂತರಂಗದ ಮೊಗ್ಗೆಗಳನ್ನರಳಿಸುವ, ಪ್ರಕೃತಿಯ ಅಂತರ್ಗತವಾದ ಚೈತನ್ಯವನ್ನು ಮೂರ್ತಿಮತ್ತಾಗಿ ತೋರಿಸುವ, ಅಕ್ಷರಾತ್ಮನ, ಅಂತರಾತ್ಮನ, ಅವಿದಿತ ರಸಗಳ ಅನಂತ ಲೀಲಾ ನಾಟ್ಯದ ಪ್ರೇಕ್ಷಕರನ್ನಾಗಿ ನಮ್ಮನ್ನು ಮಾಡುವ, ನಶ್ವರದೊಳಗಿನ ಈಶ್ವರನನ್ನು ಅಂತಶ್ಚಕ್ಷುವಿಗೆ ಪ್ರತ್ಯಕ್ಷೀಕರಿಸುವ ಕಾವ್ಯ - ನಮಗೆ ಬೇಕಾದ ಕಾವ್ಯ. ಎಂದು ಗುರು ಅರವಿಂದರು ಹೇಳಿರುವರು. 'We want men-making poets' ಎಂದು ಇಮರ್ಸನ್ನನ ಆದೇಶ.

ಶ್ರೀ ರವೀಂದ್ರರು, ರೋಮೇನ ರೋಲ್ಯಾಂಡ, ಅನ್ಯಾಟೋಲ್ ಫ್ರಾನ್ಸ್, ಮಾರಿಸಮೆಟರ್ಲಿಂಕ, ಮತ್ತು ಯೀಟ್ಸ ಮೊದಲಾದ ನೋಬೆಲ್ ಪ್ರಾಯಿಜ ಪಡೆದ ಕವಿಗಳ ಕೃತಿಗಳಾದರೂ ಇದೇ ಹಾದಿಗೆ ಬೊಟ್ಟು ಮಾಡುತ್ತವೆ. ಇಮರ್ಸನ್, ವಾಲ್ಟವ್ಹಿಟ್‌ಮನ, ಗುರು ಅರವಿಂದ,

ಪಿ. ಈ-ಎಡ್ವರ್ಡ್ ಕಾರ್ಪೆಂಟರ ಇವರ ಕಾವ್ಯಗಳು ಆದನ್ನೇ ಹೇಳು ತ್ತವೆ. ನನ್ನ ಕನ್ನಡ ನಾಡಿನ ಕವಿಗಳು ಈ ಕಾವ್ಯದ ಈ ದಿವ್ಯ ಮಾರ್ಗದ ಮೇಲೆ ತೀವ್ರ ಬಂದಾರೆಂದು ನಿರೀಕ್ಷಿಸುತ್ತೇನೆ.

† ಶಿಶುನಾಳ ಶರೀಫ ಸಾಹೇಬರ ಆತ್ಮವೇಧಕವಾಣಿ, ಹಳ್ಳಿ ಪಳ್ಳಿಯ ಓಣಿ ಓಣಿಗಳೊಳಗಿನ ಮಾತು ಕಥೆಗಳನ್ನೂ ರೂಪಕದ ಅವಯವಗಳ ನ್ನಾಗಿ ಮಾಡಿ ಆತ್ಮದ ರಂಗು ರೂಪನ್ನು ನಿರೂಪಿಸುವ ಯೋಗ ಕುಶಲ ವಾಣಿ, ಬೇಕು. Genius is the power to read the poetry of the affair ಎಂದೂ 'Imaginations means use of symbols' ಎಂದೂ ಇಮರ್ಸನ್‌ನು ಹೇಳಿರುವನು. ಇಗೋ ನೋಡಿರಿ. ಆತ್ಮೋದ್ಧಾರ ಪರಾಙ್ಮುಖವಾಗಿ ಬಂದು ಪತನೋನ್ಮುಖವಾದ ಜೀವಕ್ಕೆ ಉಡಕಿಯಮಾಡಿಕೊಂಡ ತಂಗಿಯೆಂದು ಅಣ್ಣನಂತೆ ಸಂಬೋಧಿಸುವ ಶರೀಫ ಸಾಹೇಬರ ಅಣ್ಣಿಯ ಹಾಡು.

ಅಳಬೇಡ ತಂಗೀ । ಅಳಬೇಡೇ । ನಿನ್ನ । ಕಳುಹಬಂದವರೆಲ್ಲಾ । ಉಳುಹಿ
ಕೊಂಬುವರಿಲ್ಲಾ ॥ಪಲ್ಲ॥
ಕಡೆಕೀಲೆ ಉಡಿಯಕ್ಕಿ ಹಾಕುವರಮ್ಮಾ । ಒಳ್ಳೇ । ದುಡುಕೀಲೇ ಮುಂದಕ್ಕೆ
ದೂಡುವರಮ್ಮಾ ॥
ಮಿಡಿಕ್ಯಾಡಿ ಮದಿವ್ಯಾದಿ ಮೋಜುಕಾಣಮ್ಮಾ । ಮುಂದೆ । ಹುಡುಕ್ಯಾಡಿ
ಮಾಯದ ಮರನೇರಿದಮ್ಮಾ ॥೧॥
ಮಿಂಡೇರ ಬಳಗವು ಬೆನ್‌ಹತ್ತಿ ಬಂದು । ನಿನ್ನಾ । ರಂಡೇರವರು ನೋಡಿ
ನಗುತಲಿ ನಿಂದು ॥
ಕಂಡವರ ಕಾಲ್ಬಿದ್ದು ಕೈ ಮುಗಿಯಲಿಂದೂ । ಕೊಟ್ಟ । ಗಂಡನಮನಿ
ಬಿಡದಾಯ್ತುವ್ವಾ ತಂಗೀ ॥೨॥
ರಂಗೀಲೆ ಉಟ್ಟೆವ್ವಾ ರೇಶೀಮಿದಡಿಶೇರಿ । ಮತ್ತ । ಹಂಗನೂಲಿನ ಪರವಿ
ಬಿಟ್ಟೆಲ್ಲ ನಾರೀ ॥
ಮಂಗಳ ಶಿಶುನಾಳಧೀಶನ ದೂರೀ । ದಿವ್ಯ । ಲಿಂಗಕ್ಕೆ ಹೊರತಾದೆಲ್ಲವ್ವ
ಗೌರೀ॥೩॥

# ಸಾಭಾರ ಸ್ವೀಕಾರ

(೧) ಸಾಹಿತ್ಯ ಪರಿಷತ್ತು ಪತ್ರಿಕಾ-ಸಂಪಾದಕ ಬಸವನಗುಡಿ ಬೆಂಗಳೂರ.

(೨) ಪ್ರಬುದ್ಧ ಕರ್ಣಾಟಕ-ಕರ್ಣಾಟಕ ಸಂಘ ಬೆಂಗಳೂರ.

(೩) ಜಯ ಕರ್ಣಾಟಕ-ಸಂಪಾದಕ ಧಾರವಾಡ.

(೪) ಭಾರತೀಯ ಶ್ರೀಸ್ವತ್ವ ವಿಂಧ್ಯಾಚಲ—
ವಿದ್ಯಾರಣ್ಯ ಗ್ರಂಥಮಾಲಾ ಆಗಡಿ.

(೫) ಕನ್ನಡನುಡಿ-ಕನ್ನಡನುಡಿ ಆಫೀಸ ಲಖಾನಿ ಟೆರೇಸ ಗವಾಸ್ಜಿ
ಪಟೇಲ ಸ್ಟ್ರೀಟ ಮುಂಬಯಿ.

(೬) ದೇಶೀಯ ಶಾಲಾಪತ್ರಿಕಾ-ಸಂಪಾದಕ ಬೆಂಗಳೂರ.

(೭) ಸನ್ಮಾರ್ಗದರ್ಶಿ-ನಂಜನಗೂಡು.

(೮) ನಿವೇದನ-(ಡಿ. ವಿ. ಗುಂಡಪ್ಪನವರಿಂದ ರಚಿತವಾದುದು)
ಕರ್ನಾಟಕ ಸಂಘ ಬೆಂಗಳೂರ.

ಇವುಗಳಲ್ಲದೆ, ಸಾಧ್ವೀ, ಸತ್ಯಾಗ್ರಹಿ, ಕರ್ಮವೀರ, ಮೈಸೂರ ಕ್ರಾನಿಕಲ್ ಮೊದಲಾದ ಪತ್ರಗಳು ನಮ್ಮೆಡೆಗೆ ಬರುತ್ತವೆ. ನಿವೇದನ ಮೊದಲಾದ ಗ್ರಂಥಗಳ ವಿಮರ್ಶೆಯನ್ನು ಮುಂದಿನ ಸಂಚಿಕೆಯಲ್ಲಿ ಮಾಡುವೆವು. ಆಯಾ ಪುಸ್ತಕಗಳನ್ನು, ವೃತ್ತ ಪತ್ರಗಳನ್ನು, ಮಾಸಿಕಗಳನ್ನು ಕಳುಹಿಸಿದ ಮಹಾಶಯರಿಗೆ ನಾವು ಕೃತಜ್ಞರಾಗಿದ್ದೇವೆ.

**ಸಂಪಾದಕ.**